ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೪೬ ಡಿಸೆಂಬರ್ ೨೦೧೦ ಸಂಚಿಕೆ : ೧೨




ತುಮಕೂರಿನಲ್ಲಿ ಏರ್ಪಡಿಸಿದ್ದ ಶ್ರೀ ರಾಮಕೃಷ್ಣರ ವಿಶ್ವಭಾವೈಕ್ಯ ಮಂದಿರ ಹಾಗೂ ಸ್ವಾಮಿವಿವೇಕಾನಂದ ಸಭಾಂಗಣದ ಲೋಕಾರ್ಪಣೆ ಸಮಾರಂಭದ ಅಂಗವಾಗಿ ನಡೆದ ಧಾರ್ಮಿಕ ಸಮಾವೇಶವನ್ನು ಪರಮಪೂಜ್ಯ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಯತಿವರ್ಯರು, ಕರ್ನಾಟಕದ ಮಾಜಿ ರಾಜ್ಯಪಾಲರಾದ ಪದ್ಮವಿಭೂಷಣ ಶ್ರೀ ಟಿ.ಎನ್. ಚತುರ್ವೇದಿ ಮೊದಲಾದವರು ಉಪಸ್ಥಿತರಿದ್ದರು



ಶ್ರೀಮಠದಲ್ಲಿ ಪ್ರತಿನಿತ್ಯ ನಡೆಯುವ ಸಾಮೂಹಿಕ ಪ್ರಾರ್ಥನೆಯಲ್ಲಿ ದೇಶದ ವಿವಿಧ ಭಾಗಗಳಲ್ಲಿ ಸೇವೆ ಸಲ್ಲಿಸುತ್ತಿರುವ ಶ್ರೀ ರಾಮಕೃಷ್ಣ ಆಶ್ರಮ ಹಾಗೂ ಇತರ ಸಂಪ್ರದಾಯಗಳ ಯತಿವರ್ಯರು, ಚಿಂತಕರು ಪೂಜ್ಯ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಭಾಗವಹಿಸಿದ್ದರು



ಶ್ರೀ ರಾಮಕೃಷ್ಣ ಆಶ್ರಮ ಹಾಗೂ ಇತರ ಸಂಪ್ರದಾಯಗಳ ಯತಿವರ್ಯರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀಗಳವರ ದಿವ್ಯದರ್ಶನ ಪಡೆದರು. ಈ ಸಂದರ್ಭದಲ್ಲಿ ತುಮಕೂರು ಜಿಲ್ಲಾಧಿಕಾರಿ ಡಾ. ಸಿ. ಸೋಮಶೇಖರ್ ಉಪಸ್ಥಿತರಿದ್ದರು.

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
**ಹೆಚ್.ಬಿ. ಗಂಗಾಧರಯ್ಯ**
**ಹಳೆಯ ವಿದ್ಯಾರ್ಥಿಗಳ ಸಂಘ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ**
**ಆಫ್‌ಸೆಟ್ ಮುದ್ರಣಾಲಯ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

ಸಂಪುಟ : ೪೬ ಡಿಸೆಂಬರ್ ೨೦೧೦ ಸಂಚಿಕೆ : ೧೨

## ಒಳಪುಟಗಳಲ್ಲಿ ...............



ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

## ಸಂಪಾದಕೀಯ

# ಸಂಘಸಿರಿ

ಮನುಷ್ಯ ಸಮಾಜ ಜೀವಿ. ಸಾಂಘಿಕ ಜೀವನ ಪ್ರೇಮಿ. ವ್ಯಕ್ತಿತ್ವ ವಿಕಸನಕ್ಕೆ ಸಂಘ ಜೀವನ ಶಿವಸೋಪಾನ. ಶ್ರೀಮಠ ದಾಸೋಹ ಕೇಂದ್ರ. ಮಾನವೀಯ ಮೌಲ್ಯಗಳ ಆಡುಂಬೊಲ, ಕೂಡಿ ಬಾಳುವ ಕಲೆಯನ್ನು ಕಲಿಸುವ ಪ್ರೇಮ ಧಾಮ. ಶರಣರ ತತ್ವಾದರ್ಶಗಳ ಬೆಳಕಿನಲ್ಲಿ ನಡೆಯುತ್ತಿರುವ ಕ್ಷೇತ್ರ ಸಿರಿ ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ. ಸಂಘ ಪ್ರಾರಂಭವಾಗಿ ಅರ್ಧಶತಮಾನಕ್ಕೂ ಹೆಚ್ಚು ಕಾಲವಾಗಿದೆ. ಸಾಧನೆಯ ಹಾದಿಯಲ್ಲಿ ಮುನ್ನಡೆದಿದೆ. ಪರಮಪೂಜ್ಯ ಶ್ರೀ ಶ್ರೀ ಗಳವರ ಶ್ರೀರಕ್ಷೆಯಲ್ಲಿ ಸೇವಾಪಥಗಾಮಿಯಾಗಿ ಹೊಸ ಹೊಸ ಯೋಜನೆಗಳನ್ನು ಹಮ್ಮಿಕೊಂಡು ಸಂತೋಷವನ್ನು ನೀಡುತ್ತ ಬರುತ್ತಿದೆ. ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ, ಮಾಸಪತ್ರಿಕೆಯ ಪ್ರಕಟಣೆ, ನೈರ್ಮಲ್ಯ ಯೋಜನೆ, ಪರಮಪೂಜ್ಯ ಶ್ರೀ ಶ್ರೀಗಳವರ ಜನ್ಮದಿನಾಚರಣೆ, ಗುರುವಂದನಾ ಸಮಾರಂಭ, ಸಿದ್ಧಗಂಗಾಶ್ರೀ ಪ್ರಶಸ್ತಿ ಪ್ರದಾನ ಯೋಜನೆಗಳನ್ನು ಹಮ್ಮಿಕೊಂಡಿದ್ದು ಈ ವರ್ಷದಿಂದ ತನ್ನ **ಐವತ್ತಾರನೇ ಮಹಾಧಿವೇಶನದಲ್ಲಿ** ಸಂಘದ ಸದಸ್ಯರಾಗಿದ್ದು ವಿವಿಧ ಕ್ಷೇತ್ರಗಳಲ್ಲಿ ವಿಶಿಷ್ಟಸಾಧನೆಯನ್ನು ಮಾಡಿರುವವರಿಗೆ **'ಸಂಘಸಿರಿ'** ಪ್ರಶಸ್ತಿಯ ಮೂಲಕ ಗೌರವಿಸುವ ಯೋಜನೆಯನ್ನು ರೂಪಿಸಿದ್ದು ಮೊಟ್ಟ ಮೊದಲನೆಯದಾಗಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರಾಗಿರುವ ಶ್ರೀ **ಕುಂ. ವೀರಭದ್ರಪ್ಪನವರನ್ನು** ಸಾಹಿತ್ಯ ಕ್ಷೇತ್ರದಲ್ಲಿ ಮಾಡಿರುವ ಸಾಧನೆಗಾಗಿ -ಶ್ರೀ **ಮುದ್ದುರಂಗಯ್ಯನವರು** ಸಾಮಾಜಿಕ ಕ್ಷೇತ್ರದಲ್ಲಿ ಮಾಡಿರುವ ಸೇವೆಯನ್ನು ಪರಿಗಣಿಸಿ, ಶ್ರೀ **ಹನುಮಂತರಾಯಪ್ಪನವರು** ವೈದ್ಯಕೀಯ ಕ್ಷೇತ್ರದಲ್ಲಿ ಸಲ್ಲಿಸುತ್ತಿರುವ ಸೇವೆಯನ್ನು ಮನಗಂಡು, ಶ್ರೀ **ವಿರೂಪಾಕ್ಷಯ್ಯನವರು** ಶಿಕ್ಷಣ ಕ್ಷೇತ್ರದಲ್ಲಿ ರಾಷ್ಟ್ರಪ್ರಶಸ್ತಿ ಪುರಸ್ಕೃತರಾದುದನ್ನು ಗುರುತಿಸಿ ಸಂಘದ ವತಿಯಿಂದ **'ಸಂಘಸಿರಿ'** ಪ್ರಶಸ್ತಿಯ ಮೂಲಕ ಸತ್ಕರಿಸಲಾಗುತ್ತಿದೆ.

ಮತ್ತೊಂದು ಸಂತಸದ ಸುದ್ದಿ. ಬೆಂಗಳೂರಿನವರಾದ ಸೋದರಿ **ಶ್ರೀಮತಿ ಶಕುಂತಲಾ ಜಯದೇವ್** ಅವರು ಶ್ರೀ ಸಂಘಕ್ಕೆ ಒಂದು ಲಕ್ಷ ರೂಗಳ ದೇಣಿಗೆಯನ್ನು ನೀಡಿ ಆ ನಿಧಿಯಿಂದ ಬರುವ ಬಡ್ಡಿಯಿಂದ ಪ್ರತಿವರ್ಷ ಸಂಘದ ಮಹಾಧಿವೇಶನದಲ್ಲಿ **'ಸಿದ್ಧಗಂಗಾ ಶಿವಕುಮಾರಶ್ರೀ'** ಪ್ರಶಸ್ತಿಯನ್ನು ಸಮಾಜದ ವಿವಿಧ ಕ್ಷೇತ್ರಗಳಲ್ಲಿ ವಿಶಿಷ್ಟ ಸಾಧನೆಯನ್ನು ಮಾಡಿದ ಮಹನೀಯರಿಗೆ ನೀಡುವಂತೆ ಕೋರಿದ್ದಾರೆ. ಪ್ರಸ್ತುತ ಮಹಾಧಿವೇಶನದಲ್ಲಿ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು, ಕರ್ನಾಟಕ ಜಾನಪದ ಅಕಾಡೆಮಿಯ ಅಧ್ಯಕ್ಷರೂ, ಶ್ರೀಮಠದ ಅನನ್ಯ ಭಕ್ತರೂ ಆಗಿರುವ ಸನ್ಮಾನ್ಯ **ಶ್ರೀ ಗೊ.ರು. ಚನ್ನಬಸಪ್ಪನವರಿಗೆ 'ಸಿದ್ಧಗಂಗಾ ಶಿವಕುಮಾರಶ್ರೀ'** ಪ್ರಶಸ್ತಿಯನ್ನು ನೀಡಲಾಗುತ್ತಿದೆ. ಸೇವಾಮುಖಿಯಾಗಿ ಮುನ್ನಡೆದಿರುವ ಶ್ರೀ ಸಂಘ ಶ್ರೀಮಠದ ಹೆಮ್ಮೆ ಆಸ್ತಿ ಎಂಬ ಪರಮಪೂಜ್ಯ **ಶ್ರೀ ಶ್ರೀಗಳವರ** ಆಶೀರ್ವಾದವೇ ಸಂಘದ ಭಾಗ್ಯ ವಿಶೇಷ.

ಈ ಸಂಚಿಕೆಯೊಡನೆ **'ಸಿದ್ಧಗಂಗಾ'** ನಲವತ್ತಾರನೆಯ ವರ್ಷವನ್ನು ಕ್ರಮಿಸಿ ನಲವತ್ತೇಳರತ್ತ ನಡೆಯುತ್ತಿದೆ. ಪತ್ರಿಕೆಯ ಮುನ್ನಡೆಗೆ ಸದಸ್ಯರಾದ ನೀವೆಲ್ಲ, ಲೇಖಕರು, ಜಾಹಿರಾತುದಾರರು, ಅಭಿಮಾನಿಗಳು, ಹಿತೈಷಿಗಳು, ಸಂಘದ ಬಂಧುಗಳು, ಸಂಪಾದಕ ಮಂಡಳಿಯ ಸದಸ್ಯರುಗಳು, ಮುದ್ರಣಾಲಯದವರು, ಪ್ರಕಾಶಕರು, ಸಲಹೆಗಳನ್ನು ಕೊಡುತ್ತಾ ಬಂದಿರುವ ಸಂಘದ ಕಾರ್ಯಕಾರಿ ಸಮಿತಿಯವರು ಸಹಕರಿಸುತ್ತಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇನೆ.

ಪತ್ರಿಕೆ ಶ್ರೀಮಠದ ಮುಖವಾಣಿ. ಇದು ಇತರ ಪತ್ರಿಕೆಗಳಂತೆ ವಾಣಿಜ್ಯ ದೃಷ್ಟಿಯನ್ನು ಹೊಂದಿಲ್ಲ. ಧಾರ್ಮಿಕ, ಸಾಹಿತ್ಯಿಕ, ಶೈಕ್ಷಣಿಕ, ಸಾಂಸ್ಕೃತಿಕ, ಕೃಷಿಕ ವಿಷಯಗಳಿಗೆ ಗಮನ ಕೊಡುತ್ತದೆ.

ಪತ್ರಿಕೆ ನಿಮ್ಮದು. ಅದು ಇನ್ನೂ ವೃದ್ಧಿಯಾಗಬೇಕು. ಆಜೀವ ಸದಸ್ಯರ ಸಂಖ್ಯೆ ನಿಮ್ಮಿಂದ ಹೆಚ್ಚಾಗಬೇಕು. ಆರ್ಥಿಕ ಭದ್ರತೆ ಅಗತ್ಯ. ನಿಮ್ಮ ಅಭಿಮಾನ, ಸಹಕಾರಗಳೇ ಪತ್ರಿಕೆಯ ಜೀವದ್ರವ್ಯ.

ಪತ್ರಿಕೆಯ ಶ್ರೀರಕ್ಷೆಯಾಗಿದ್ದುಕೊಂಡು ಆಶೀರ್ವದಿಸುತ್ತಿರುವ ಪರಮಪೂಜ್ಯ ಶ್ರೀ ಶ್ರೀಗಳೀರ್ವರ ಶಿವಚರಣಗಳಲ್ಲಿ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

-ಸಂಪಾದಕ



## ಶ್ರೀವಾಣಿ



# ಅಭಿನಂದನೆ

ತುಮಕೂರಿನ ಭಾಗ್ಯ ಶ್ರೀ ವೀರೇಶಾನಂದಸ್ವಾಮಿಗಳು, ಸ್ವಾಮಿವಿವೇಕಾನಂದರ, ರಾಮಕೃಷ್ಣಪರಮಹಂಸರ ಮಾನವೀಯತೆಯ ಮಹೋನ್ನತ ವಿಚಾರಧಾರೆಯನ್ನು ಯುವಜನತೆಗೆ ಮುಟ್ಟಿಸುತ್ತಿರುವ ತನ್ಮೂಲಕ ರಾಷ್ಟ್ರಪ್ರೇಮಿಗಳನ್ನು ರೂಪಿಸುತ್ತಿರುವ ಯುವ ಸಂನ್ಯಾಸಿಗಳು. ಸ್ವಾಮಿಯಾದವರಿಗೆ ಇರಬೇಕಾದ ಎಲ್ಲ ಸಲ್ಲಕ್ಷಣಗಳನ್ನು ಮೈಗೂಡಿಸಿ ಕೊಂಡಿರುವ ಆದರ್ಶಪುರುಷರು. ಸರ್ವಧರ್ಮ ಪ್ರೇಮಿಗಳಾಗಿ ಕಾಯಕತತ್ಪರರಾಗಿ ಸದ್ದು ಗದ್ದಲಗಳಿಂದ ದೂರವಾಗಿ ವಿಶ್ವಪರ್ಯಟಣೆ ಮಾಡುತ್ತ ಭಾರತೀಯ ಸುಸಂಸ್ಕೃತ ಜೀವನದ ಆಳ-ಅಗಲಗಳನ್ನು ಜನಮನದಲ್ಲಿ ತಮ್ಮ ಸರಳ ಸುಂದರ ಪ್ರವಚನಗಳ ಮೂಲಕ ಬಿತ್ತುತ್ತ ನಡೆದಿರುವ ಶ್ರೀಗಳು ಸಾಧನೆಯ ಸಾಕ್ಷಿ ದೀಪಗಳನ್ನು ಬೆಳಗಿಸುತ್ತ ಮುನ್ನಡೆದಿರುವುದು ತುಮಕೂರಿನ ಪುಣ್ಯವಿಶೇಷ.

ಇದೀಗ ರಾಮಕೃಷ್ಣ-ವಿವೇಕಾನಂದ ಆಶ್ರಮದಲ್ಲಿ ಭಗವಾನ್ ಶ್ರೀರಾಮಕೃಷ್ಣರ ವಿಶ್ವ ಭಾವೈಕ್ಯಮಂದಿರ ಹಾಗೂ ಶ್ರೀಸ್ವಾಮಿ ವಿವೇಕಾನಂದ ಸಭಾಂಗಣ ಮತ್ತು ಭಗವಾನ್ ಶ್ರೀರಾಮಕೃಷ್ಣರ ಅಮೃತಶಿಲಾಮೂರ್ತಿಯ ಪ್ರತಿಷ್ಠಾಪನೆಯನ್ನು ಹಮ್ಮಿಕೊಂಡು ತುಮಕೂರಿಗೆ ಹೊಸ ಬೆಳಕನ್ನು ತಂದಿರುವ ಸಾಹಸವನ್ನೇ ಮಾಡಿರುತ್ತಾರೆ. ನಿರ್ಮಾಣವಾಗಿರುವ ಮಂದಿರ ಹಾಗೂ ಸಭಾಂಗಣಗಳು ಭವ್ಯವಾಗಿವೆ. ಭಕ್ತರ ಮನದಂಗಳದಲ್ಲಿ ದಿವ್ಯಾನುಭವ ವನ್ನುಂಟು ಮಾಡುವಂತಿವೆ. ತುಮಕೂರು ಜನತೆಗೆ ದೇಶ-ವಿದೇಶಗಳಲ್ಲಿರುವ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ ಮಠಗಳ ಸ್ವಾಮಿಗಳ ದರ್ಶನ ಮಾಡಿಸುವ ಪುಣ್ಯ ಸೇವೆ ಮಾಡಿದ್ದಾರೆ. ಇಂದಿನ ಭ್ರಷ್ಟ ವಿಕೃತ ಮನಸ್ಸುಗಳಿಗೆ ದಿವ್ಯ ಔಷಧಿಯನ್ನು ವಿವಿಧ ಶ್ರೀಗಳವರ ವಾಣಿಯ ಮೂಲಕ ಕೊಡಿಸಿದ್ದಾರೆ. ಸರ್ವ ಜನಾಂಗದ ಪ್ರೀತಿ ವಿಶ್ವಾಸಗಳನ್ನು ಗಳಿಸಿರುವ ಸ್ವಾಮಿವೀರೇಶಾನಂದರ ಕರ್ತೃತ್ವ ಶಕ್ತಿಯನ್ನು ಕಂಡ ಯಾರಿಗಾದರೂ ಹೆಮ್ಮೆ ಎನಿಸುತ್ತದೆ. ನಿರಹಂಕಾರದ ನಿರ್ಮಲ ಮನಸ್ಸಿನ ಶ್ರೀಗಳು ಅದ್ಭುತ ಸಾಧನೆಯ ಸಾಹಸಿಗಳಾಗಿದ್ದಾರೆ. ಮನದ ಮೈಲಿಗೆಯನ್ನು ಕಳೆವ ಮಣಿಹಮುಖಿಗಳಾಗಿ ಮುನ್ನಡೆದಿರುವುದು ನಿಜಕ್ಕೂ ಅಭಿನಂದನೀಯವಾದುದಾಗಿದೆ. ದಿನಾಂಕ ೬, ೭, ೮ ಮತ್ತು ೯ನೇ ಡಿಸೆಂಬರ್ ೨೦೧೦ರಂದು ಶ್ರೀ ಆಶ್ರಮದಲ್ಲಿ ಆಯೋಜಿತವಾಗಿದ್ದ ಸಮಾರಂಭ ಶ್ರೀಗಳ ವ್ಯಕ್ತಿತ್ವದ ಸಾಧನೆಯ ಸಾಲುದೀಪಗಳನ್ನು ತೂಗು ಬಿಟ್ಟಿರುವುದಾಗಿದೆ. ತುಮಕೂರಿನ ಜನತೆ ಶ್ರೀಗಳವರಿಗೆ ಕೃತಜ್ಞರಾಗಿರಬೇಕಾಗಿದೆ.

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

ಅಕ್ಕತಮ್ಮನ ಸಂಗದಿಂದ ಹೆತ್ತವ್ವೆ ಹುಟ್ಟಿದಳು ನೋಡಾ
ಹೆತ್ತವ್ವೆ ಹುಟ್ಟಲು ಅಕ್ಕನು ತಮ್ಮನು ಅಳಿದರು ನೋಡಾ
ಆ ಹೆತ್ತವ್ವೆ ಮುತ್ತವ್ವೆಯ ನುಂಗಿ ಪರತತ್ತ್ವವಾದಳು
ನೋಡಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಗುರುಶಿಷ್ಯರ ಹಸ್ತಮಸ್ತಕ ಸಂಯೋಗದಿಂದೆ ಜ್ಞಾನಶಕ್ತಿ ಸ್ವರೂಪವಾದ ಇಷ್ಟಲಿಂಗ ಉದಯವಾಯಿತ್ತು. ಅಂತಪ್ಪ ಲಿಂಗ ಸ್ವರೂಪವಾದ ಸುಜ್ಞಾನೋದಯದಿಂದೆ ಜ್ಞಾನಶಕ್ತಿ ಸ್ವರೂಪ ವಾದ ಗುರುಶಿಷ್ಯರೆಂಬ ಜೀವಾತ್ಮ ಪರಮಾತ್ಮರುಗಳಿಗೆ ಪೂರ್ಣ ಸ್ವರೂಪವಾದ ಚಿದ್ಘನಲಿಂಗದಲ್ಲೇಕತ್ವ ದೊರೆಕೊಂಡಿತ್ತು. ಆ ಪರಿಪೂರ್ಣ ಜ್ಞಾನಶಕ್ತಿಯು ಚಿಚ್ಛಕ್ತಿಯಲ್ಲಿ ಸಮರಸವನೆಯ್ದ ಆ ಚಿಚ್ಛಕ್ತಿಗಾಧಾರವಾದ ಪರಬ್ರಹ್ಮದಲ್ಲೇಕತ್ವವನೆಯ್ದಿದಳು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ- ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ- ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಅಷ್ಟಮದಗಳ ಕಳೆವ ಮೌನ ಚೇತನವೈದ್ಯ
ಅಷ್ಟಾಂಗವ ಶುಚಿಗೊಳಿಪ ಕರುಣಾಳು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೇಹಭಾವವ ನೀಗಿ ಬಟ್ಟಬಯಲಾಗುವ
ದಿಟ್ಟಯೋಗವ ಕಲಿಪ ಶಿವಯೋಗಿ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮೌನಿಯಾಗುವೆ ನೆನೆದು ಧ್ಯಾನ ಮಾಡುವೆ ನೆನೆದು
ಸುಖಿಸಿ ಸುಮ್ಮನೆ ನೆನೆವೆ ತವ ಚರಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಬ್ದಮುಗ್ಧರಗೊಳಿಪೆ ಲಿಂಗನುಡಿಗಳನಾಡಿ
ಶಬ್ದಸಾಗರವೆ ಬೆರಗಾಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ಪ್ರಸಾದವೆ ಎನ್ನನಾಡಿಸುತಿಹುದು
ನಿನ್ನ ಕಾರುಣ್ಯವೆ ಈ ಹಾಡು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುವೆ ನೀನಮಿಷ ಪರಮಸತ್ಯರೂಪ
ಪರವ ಇಹದೊಳಗೆ ನಿರವಿಸಿದ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಹಮನೆಯ ಕಟ್ಟಿರುವೆ ದಾಸೋಹ ನಡೆಸಿರುವೆ
ಅಚ್ಚರಿಗೆ ಅಚ್ಚರಿಯ ಮುಡಿಸಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನೆ ಗುರುವಾಗಿರುವೆ ನೀನೆ ಲಿಂಗವಾದೆ
ನೀನೆ ಜಂಗಮವಾಗಿ ಸುಳಿದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ನಿನ್ನ ಲೀಲೆಯ ಘನವ ನೀನೆ ಬಲ್ಲೆ' ಎಂಬೆ
ಲೋಕ ಕಾಣುವುದೆಂತು ನಾನರಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಂತರಂಗದ ಬೆಳಕೆ ಬಹಿರಂಗವನು ತುಂಬಿ
ಸಂದು ಸಂಶಯ ದಾಟಿ ನಡೆಸಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







# ಇಸ್ಲಾಂ ಹಾಗೂ ವೀರಶೈವ ಸಂಸ್ಕೃತಿ – ಒಂದು ಚಿಂತನೆ

–ಪ್ರೊ. ಡಿ. ಜವರೇಗೌಡ *

ಈ ಎರಡು ವಿಶ್ವಧರ್ಮಗಳ ಸ್ವರೂಪ ಲಕ್ಷಣಗಳನ್ನು ಕೇವಲ ದಿಗ್ದರ್ಶನಾರ್ಥವಾಗಿ, ಅತ್ಯಂತ ಸ್ಥೂಲವಾಗಿ ವಿಹಂಗಮ ದೃಷ್ಟಿಯಿಂದ ತೌಲನಿಕ ರೀತಿಯಲ್ಲಿ ಈ ಲೇಖನದಲ್ಲಿ ವಿವೇಚಿಸಲಾಗಿದೆ. ಕಾಲದೇಶಾತೀತವಾಗಿ, ಜಾತಿಮತ ಲಿಂಗ ಭೇದಗಳನ್ನು ಮೀರಿ ನಿಲ್ಲುವ ಲೋಕಕಲ್ಯಾಣಕರವಾದ ಅನೇಕ ಚಿರಂತನ ಮೌಲ್ಯಗಳು ಈ ಎರಡೂ ಧರ್ಮಗಳಲ್ಲಿ ಅಡಕವಾಗಿವೆ. ಮುಖ್ಯವಾಗಿ ಸತ್ಯ ಸಮಾನತೆ ಸಚ್ಚಾರಿತ್ರ್ಯಗಳಿಗೆ ಇವು ಒತ್ತು ಕೊಡುತ್ತವೆ; ಧರ್ಮ ನ್ಯಾಯಗಳ ಚೌಕಟ್ಟಿನಲ್ಲಿ ದರಿದ್ರ ಶ್ರೀಮಂತರ ಅಂತರ ಕಡಿಮೆಯಾಗಬೇಕೆಂದು ಕಡ್ಡಾಯ ಮಾಡುತ್ತವೆ; ಎಲ್ಲಕ್ಕಿಂತ ಮಿಗಿಲಾಗಿ ಕರುಣೆ ಅನುಕಂಪೆ ನೆರೆಹೊರೆಯವರ ಪ್ರೀತಿ ಮಾನವೀಯ ಲಕ್ಷಣಗಳೆಂದು ಘೋಷಿಸುತ್ತವೆ. ಈ ಘೋಷಣೆಗಳು ವಾಸ್ತವೀ ಕರಣಗೊಂಡದ್ದಾದರೆ ಈ ಜಗತ್ತಿನಲ್ಲಿ ಕಲಹ ಮಾತ್ಸರ್ಯ ರಕ್ತಪಾತಗಳಿಗೆ ಎಡೆಯಿರುತ್ತದೆಯೆ?

ವಿಶ್ವ ಮೌಲ್ಯಗಳ ಜತೆಗೆ, ಕಾಲದೇಶಬದ್ಧ ಸಮಾಜವಾದ ಮೌಲ್ಯಗಳೂ ಆ ಧರ್ಮಗಳಲ್ಲಿ ಸೇರಿಕೊಂಡಿರುವುದು ಸಹಜವೇ. ಅವು ಅವತರಿಸಿದಾಗ ಆಯಾ ಕಾಲಮಾನ, ದೇಶಮಾನ, ಪರಿಸ್ಥಿತಿ, ರೂಢಿ ಸಂಪ್ರದಾಯಗಳು ಆಯಾಯ ಧರ್ಮಗಳಲ್ಲಿ ಪ್ರತಿಫಲಿಸುವುದೂ ಉಂಟು. ಕಾಲ ಬದಲಾವಣೆಗೊಂಡಂತೆ, ಜ್ಞಾನ ವಿಜ್ಞಾನಗಳು ಬೆಳೆದಂತೆ ಅವುಗಳಿಗನುಗುಣವಾಗಿ ಕಾಲಬದ್ಧ ದೇಶಬದ್ಧ ಮೌಲ್ಯಗಳನ್ನು ತಿದ್ದುಕೊಳ್ಳುವುದು ಲೋಕಹಿತದೃಷ್ಟಿಯಿಂದ ಮಾತ್ರವಲ್ಲ, ವ್ಯಕ್ತಿಹಿತದ ದೃಷ್ಟಿಯಿಂದಲೂ ಅನಿವಾರ್ಯ. ಧರ್ಮ ನಿಂತ ನೀರಾಗದೆ ಹರಿಯುವ ಹೊಳೆಯಾದಾಗ ಮಾತ್ರ ಅದು ಜೀವಂತವಾಗಿರುತ್ತದೆ. ಲೋಕ ಕ್ಷೇಮಕಾರಿಯಾಗುತ್ತದೆ. ಆಗಲಿಲ್ಲ, ನಿಸರ್ಗಸಹಜವಾದ ಕ್ರಾಂತಿ ಪ್ರಗತಿಗಳಿಗೆ ಧಕ್ಕೆಯೊದಗುತ್ತದೆ. ಪ್ರಗತಿ ಸ್ಥಗಿತಗೊಂಡಾಗಲೇ ಹಳೆಯ ಧರ್ಮಕ್ಕೆ ಪ್ರತಿಭಟನೆ ಪ್ರಾರಂಭವಾಗುತ್ತದೆ; ಅಂಥ ಪ್ರತಿಭಟನೆಯನ್ನು ಪ್ರಾಟೆಸ್ಟಾಂಟ್, ವೀರಶೈವ, ಸಿಖ್ ಪಂಥಗಳ ರೂಪದಲ್ಲಿ ಕಾಣುತ್ತೇವೆ. ಪ್ರತಿಭಟನೆಯ ಬೀಜದಿಂದ ಹುಟ್ಟಿದ ಮತಗಳು ಮೂಲದೊಂದಿಗೆ ಪೈಪೋಟಿಯಾಗಿ ಹೆಣಗುವುದೂ ಉಂಟು.

ಧರ್ಮಗ್ರಂಥಗಳು ಅಪೌರುಷೇಯವೆಂಬ ನೆಪದಿಂದ ಅವುಗಳನ್ನು ಬದಲಾಯಿಸಬಾರದೆಂಬ ಸಂಪ್ರದಾಯ ಶರಣರ ಅಂದರೆ ಮೂಲಭೂತವಾದಿಗಳ ವಾದ ಯಾವಾಗಲೂ ಇದ್ದದ್ದೇ. ಈ ವಾದ ವಿವೇಕದಿಂದ ಕೂಡಿದ್ದಲ್ಲವೆಂದು ಪ್ರತಿವಾದಿಗಳು, ಅಂದರೆ ವಿಚಾರವಾದಿಗಳು ಸಮರ್ಥಿಸಿಕೊಳ್ಳಬಹುದು. ಅದೇನೇ ಇರಲಿ, ತಮ್ಮ ಸಂಪ್ರದಾಯಗಳನ್ನು ಗೌರವಿಸಲಪೇಕ್ಷಿಸುವವರು ಇತರರ ಸಂಪ್ರದಾಯಗಳನ್ನು ಗೌರವಿಸಬೇಕಾದ್ದು ಸುಸಂಸ್ಕೃತಿಯ, ಸಭ್ಯತೆಯ ಲಕ್ಷಣ. ವಿಗ್ರಹಾರಾಧನೆ ಮೂಲತಃ ಈ ಎರಡು ಧರ್ಮಗಳಿಗೂ ಬೇಡವಾದ ಸಂಗತಿ ತಾನೆ. ಆದರೆ ವೀರಶೈವ ಧರ್ಮ ವಿಗ್ರಹಾರಾಧನೆಯನ್ನು ದ್ವೇಷಿಸುವುದಿಲ್ಲ; ಇಸ್ಲಾಂ ಧರ್ಮ ದ್ವೇಷಿಸುತ್ತದೆ. ನಿಜವಾದ ಆಸ್ತಿಕರು ಅನ್ಯಧರ್ಮಗಳನ್ನಾಗಲಿ, ಅಲ್ಲಿಯ ದೇವರುಗಳನ್ನಾಗಲಿ ಹಳಿಯಲಾರರು. ಶ್ರೀರಾಮಕೃಷ್ಣ ಪರಮಹಂಸರ ಮತ್ತು ಸ್ವಾಮಿ ವಿವೇಕಾನಂದರ ಸಂದೇಶವನ್ನು ಇಂಥ ಸಂದರ್ಭದಲ್ಲಿ ಮರೆಯಬಾರದು. ಬೇರೆ ಧರ್ಮಗಳ ದೇವರುಗಳನ್ನು ಹಳಿಯುವವರು ಯಾರೇ ಆಗಿರಲಿ, ಅವರು ಕಾಫಿರರು, ಮ್ಲೇಚ್ಛರು ಅಥವಾ ನಾಸ್ತಿಕರೇ ಹೊರತು, ಸತ್ಪುರುಷರಲ್ಲ, ಸದ್ಧರ್ಮಿಗಳಲ್ಲ. ಸ್ವಧರ್ಮವಾಗಲಿ, ಪರ ಧರ್ಮವಾಗಲಿ, ಅವುಗಳನ್ನು ಏಕರೀತಿಯಿಂದ ಕಾಣುವವರೇ ಧರ್ಮಿಷ್ಠರು ಹಾಗೂ ಆಸ್ತಿಕರು.

ಭಾರತ ಜಗತ್ತಿನ ಎಲ್ಲ ಧರ್ಮಗಳ ಆಡುಂಬೊಲವಾಗಿದೆಯಷ್ಟೆ. ಅದು ಈ ದೇಶದ ಸಂಪತ್ತೂ ಹೌದು, ವಿಪತ್ತೂ ಹೌದು; ವರವೂ ಹೌದು, ಶಾಪವೂ ಹೌದು. ಪ್ರತಿಯೊಬ್ಬ ಭಾರತೀಯನೂ ಸ್ವಧರ್ಮವನ್ನು ಬಿಡದೆ, ಇತರ ಧರ್ಮಗಳು ಸಹ ತನ್ನ ಧರ್ಮದಂತೆ ಪವಿತ್ರವೆಂದು ಗೌರವಿಸುವುದಾದರೆ ಅವು ರಾಷ್ಟ್ರದ ಸಂಪತ್ತಾಗುತ್ತವೆ;

* ವಿಶ್ರಾಂತ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ವಿಶ್ವಚೇತನ, ಕಾಳಿದಾಸ ರಸ್ತೆ, ಜಯಲಕ್ಷ್ಮಿಪುರ, ಮೈಸೂರು.

ರಾಷ್ಟ್ರೈಕ್ಯದ ಸೂತ್ರಗಳಾಗುತ್ತವೆ; ಅವುಗಳಿಗೆ ವಿರುದ್ಧವಾಗಿ ವರ್ತಿಸುವುದಾದರೆ, ಅವು ವಿಪತ್ಕಾರಕವಾಗುತ್ತವೆ, ಛಿದ್ರತೆಯ ಸಿಡಿಗುಂಡುಗಳಾಗುತ್ತವೆ. ಹಿಂದಿನಂತಲ್ಲ, ಈಗ ಭಾರತವೇ ಆಗಲಿ, ಬೇರೆ ದೇಶವೇ ಆಗಲಿ, ತನ್ನಷ್ಟಕ್ಕೆ ತಾನೇ ಪ್ರತ್ಯೇಕತಾ ನೀತಿಯನ್ನನುಸರಿಸುತ್ತ, ಸಣ್ಣ ದ್ವೀಪವೊಂದನ್ನು ನಿರ್ಮಿಸಿಕೊಂಡು ನಿರ್ಭಯವಾಗಿ ಬಾಳು ವಂತಿಲ್ಲ. ಯಾವೊಂದು ಘಟನೆ ಅಥವಾ ವಿದ್ಯಮಾನ ಎಲ್ಲಿಯೇ ನಡೆಯಲಿ, ಅದು ಜಗತ್ತಿನ ಎಲ್ಲ ರಾಷ್ಟ್ರಗಳ ಮೇಲೆ ಅದಮ್ಯ ಪ್ರಭಾವ ಬೀರುತ್ತದೆ. ಬಿಕ್ಕಟ್ಟಿನ ಪರಿಸ್ಥಿತಿ ಯಲ್ಲಿ, ಭಾವೋದ್ರೇಕದ ಸಂದರ್ಭದಲ್ಲಿ ಈ ವಿಷಯ ನೆನಪಿಗೆ ಬರುವುದಿಲ್ಲ. ವಿವೇಕಹೀನರಾದ ಮೂಲಭೂತವಾದಿಗಳು ವಿವಾದದ ರಚ್ಚೆಬ್ಬಿಸಿ ಪರಿಸ್ಥಿತಿ ಅಪಾಯದ ಗೆರೆಯನ್ನು ದಾಟುವ ಮುನ್ನ ಸುಜ್ಞಾನಿಗಳು ಕುವೆಂಪು ಅವರ ಪಂಚ ಮಂತ್ರಗಳನ್ನು– ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ, ಮನುಜಮತ, ವಿಶ್ವಪಥಗಳನ್ನು ನೆನೆದು, ಚಿಂತನಪರರಾಗಿ, ಸಮೀಕರಣ ಸೂತ್ರವನ್ನು ಕಂಡುಕೊಳ್ಳುವುದಾದರೆ, ಲೋಕದ ಜಂಜಡ ಜಂಜಾಟಗಳು ಕರಗಿ ಹೋಗುತ್ತವೆ. ಇಸ್ಲಾಂ ಮತ್ತು ವೀರಶೈವ ಧರ್ಮಗಳಲ್ಲಿ ಪರಸ್ಪರ ಹೊಂದಾಣಿಕೆಗೆ ಸಾಕಷ್ಟು ಅವಕಾಶವಿದೆ. ವಿಜ್ಞಾನಯುಗಕ್ಕೆ ವಿರೋಧವಾದ ಬಾಹ್ಯಾಚಾರಗಳನ್ನು ಮರೆತು ಇಲ್ಲವೆ ನಿರ್ಲಕ್ಷಿಸಿ, ಪ್ರಾಮಾಣಿಕವಾಗಿ ಹೊಂದಾಣಿಕೆಯನ್ನು ಸಾಧಿಸುವುದಾದರೆ ಲೋಕದಲ್ಲಿ ಹಾಗೂ ರಾಷ್ಟ್ರದಲ್ಲಿ ಶಾಂತಿ ಪ್ರೇಮಗಳು ಶಾಶ್ವತವಾಗಿ ನೆಲೆಸುತ್ತವೆಂಬುದರಲ್ಲಿ ಸಂದೇಹವಿಲ್ಲ.

ಹಿಂದೂ ಧರ್ಮವೊಂದು ಜೀವನವಿಧಾನವೆಂದೂ, ಸಹಿಷ್ಣುತೆ ಅದರ ಪ್ರಮುಖ ಲಕ್ಷಣವೆಂದೂ ಪಂಡಿತರು ಮೀಸೆ ಹುರಿಮಾಡುವುದುಂಟು. ಇತರ ಧರ್ಮೀಯರೂ ಹಾಗೆಯೇ ಹೇಳಿಕೊಳ್ಳುತ್ತಾರೆ. ಆದರೆ ಜೀವನದಲ್ಲಿ ಇದು ನಿಜವಿದ್ದಂತೆ ತೋರುವುದಿಲ್ಲ. ಸಹಿಷ್ಣುತೆ ಹಿಂದೂ ಧರ್ಮದ ಪ್ರಮುಖ ಲಕ್ಷಣವಾಗಿದ್ದರೆ, ಅದು ಬೌದ್ಧ ಧರ್ಮವನ್ನು ದೇಶದಿಂದಾಚೆಗೆ ಗಡೀಪಾರು ಮಾಡಬೇಕಾಗಿತ್ತೆ? 'ಇಸ್ಲಾಂ ಅತ್ಯಂತ ಸಹಿಷ್ಣುತೆಯ ಧರ್ಮವಾಗಿದೆ. ಬಹುದೇವತಾರಾಧಕರ ಕೃತಕ ದೇವರುಗಳನ್ನು ಅವಹೇಳಿಸುವುದನ್ನು ಕುರಾನ್ ವಿರೋಧಿಸುತ್ತದೆ' ಎಂದು 'ಇಸ್ಲಾಂ–ಏಕತಾಶಕ್ತಿ' ಎಂಬ ತಮ್ಮ ಗ್ರಂಥದಲ್ಲಿ ಮೌಲಾನಾ ಮಹಮ್ಮದ್ ಯುಸೂಫ್(ಪು.೧೩) ಹೇಳಿರುವುದು ನಿಜವಾದರೆ, ಹಿಂದೂ ಮುಸ್ಲಿಂ ಕಲಹಕ್ಕೆ ಕಾರಣವೇ ಇರಬಾರದು: ಪ್ರತಿಯೊಂದು ಧರ್ಮದವರೂ ಎದುರು ಧರ್ಮದ ಉತ್ತಮಿಕೆಯನ್ನು ಮರೆತು, ತಮ್ಮ ಧರ್ಮ ಮಾತ್ರ ಶ್ರೇಷ್ಠವೆಂದೂ, ಉಳಿದದ್ದೆಲ್ಲ ಅಬದ್ಧವೆಂದೂ ಹೇಳುವುದು ವಾಡಿಕೆಯಾಗಿದೆ. ಹಾಗೆ ಹೇಳುವವರು ಮತಾಂಧ ಮೂಲಭೂತವಾದಿಗಳೆ ಹೊರತು ಸತ್ಯನಿಷ್ಠರೂ ಅಲ್ಲ, ಧರ್ಮಿಷ್ಠರೂ ಅಲ್ಲ. ಸೃಷ್ಟಿಕರ್ತನ ಬಗೆಗಿನ ಕಲ್ಪನೆಯಲ್ಲಾಗಲಿ, ಆ ಕಲ್ಪನೆಯಿಂದ ಸಂಲಬ್ಧವಾಗುವ ಅವನ ಮಹಿಮೆಯಲ್ಲಾಗಲಿ ಧರ್ಮದಿಂದ ಧರ್ಮಕ್ಕೆ ಯಾವ ವ್ಯತ್ಯಾಸವೂ ಇಲ್ಲ. ಕುರಾನ್ ಪ್ರಕಾರ ಸೃಷ್ಟಿಕರ್ತನಾದ 'ಅಲ್ಲಾನೇ ಪರಮ ಪ್ರಭು. ಅವನಿಗೆ ಸಮನಾದವರು ಯಾರೂ ಇಲ್ಲ; ಅವನು ನಿರಾಕಾರ, ಅದ್ವಿತೀಯ, ಅಪ್ರಮೇಯ; ನರನಿರ್ಮಿತ ವಿಗ್ರಹದಲ್ಲಿ ಅಥವಾ ಮೂರ್ತಿಯಲ್ಲಿ ಅವನನ್ನು ಬಂಧಿಸುವುದರಿಂದ ಅವನಿಗೆ ದ್ರೋಹವೆಸಗಿದಂತಾಗುತ್ತದೆ. ಆದ್ದರಿಂದಲೇ ಇಸ್ಲಾಂ ವಿಗ್ರಹಾರಾಧನೆಯನ್ನೂ ನಿಷೇಧಿಸುತ್ತದೆ. ಹಿಂದೂಗಳ ಪರಬ್ರಹ್ಮ ಅಥವಾ ಈಶ್ವರ ಕಲ್ಪನೆ ಅಲ್ಲಾನ ಕಲ್ಪನೆಗಿಂತ ಭಿನ್ನವಾಗಿಲ್ಲ. ನಿಜವಾದ ಸಾಧುಸಂತರು ಆರಾಧಿಸುವ ರಾಮ ಪರಬ್ರಹ್ಮ ಸ್ವರೂಪಿ ಎನ್ನುವುದನ್ನು ಮರೆಯಲಾಗದು. ಮತ್ತೊಬ್ಬರ ಧರ್ಮವನ್ನು ಸರಿಯಾಗಿ ಅರ್ಥಮಾಡಿಕೊಳ್ಳದ ಕಾರಣದಿಂದಾಗಿ ಅವಿವೇಕದ ಅನಾಹುತಗಳು ಮತ್ತು ಆಕಸ್ಮಿಕಗಳು ಸಂಭವಿಸುತ್ತವೆಂದು ಊಹಿಸಬಹುದಾಗಿದೆ. ಹೆಸರಿನಲ್ಲಿ ವ್ಯತ್ಯಾಸವೇ ಹೊರತು, ಅರ್ಥದಲ್ಲಲ್ಲ, ತತ್ತ್ವದಲ್ಲಲ್ಲ ಎಂಬುದನ್ನು ಶ್ರೀರಾಮಕೃಷ್ಣಪರಮಹಂಸರೂ, ಮಹಾತ್ಮಗಾಂಧಿಯವರೂ ಸಾಧಾರವಾಗಿ ತೋರಿಸಿದ್ದಾರೆ. ***'ಈಶ್ವರ ಅಲ್ಲಾ ತೇರೇ ನಾಮ್, ಸಬ್‌ಕೋ ಸನ್ಮತಿ ದೇ ಭಗವಾನ್'.***

ವೇದಾಂತದಿಂದ ಹೊರತಾದ ಹಿಂದೂ ಧರ್ಮದಂಥ ಅಸಮಾನತೆಯ, ಶೋಷಣೆಯ, ಭೇದಾತ್ಮಕ ಧರ್ಮ ಮತ್ತೊಂದಿಲ್ಲ. ಅದರ ಲೋಪದೋಷಗಳನ್ನು ಜಾಲಾಡಿಸಿ, ಸರ್ವಸಮಾನತೆಯ ಸರ್ವೋದಯ ಧರ್ಮವನ್ನು ಸಂಸ್ಥಾಪಿಸಬೇಕೆಂಬುದೇ ಬಸವಣ್ಣನವರ ಜೀವನದ ಮುಖ್ಯೋದ್ದೇಶ. ಇಡೀ ಜಗತ್ತಿಗೆ ಮಾದರಿಯಾಗಬಹುದಾದ, ಲೋಕಕ್ಷೇಮಕ್ಕೆ ಕಾರಣವಾಗಬಹುದಾದ, ಜನ ಜನರ ನಡುವಣ ಗೋಡೆಗಳನ್ನು ವಿನಾಶಗೊಳಿಸುವಂಥ ಸತ್ವ ಆ ಬಸವಧರ್ಮದಲ್ಲಿತ್ತು. ನಿಜ, ಕಾಲಕ್ರಮೇಣ, ಅದರ ಮೂಲತತ್ತ್ವಗಳನ್ನು ಜನ ಅನುಸರಿಸಲಿಲ್ಲವಾಗಿ, ಅದರ ಪೂರ್ಣಲಾಭ ಜಗತ್ತಿಗೆ ದೊರೆಯದಾಯಿತು. ಭರತಖಂಡದ





ಸಕಲ ಸಮಸ್ಯೆಗಳಿಗೆ ಇಸ್ಲಾಂ ಮತ್ತು ವೀರಶೈವ ಸಂಸ್ಕೃತಿಗಳ ಪರಸ್ಪರ ಅರಿವು, ಹೊಂದಾಣಿಕೆಗಳಿಂದ ಪರಿಹಾರ ದೊರೆಯಬಹುದೆಂಬುದಕ್ಕೆ ತಿಂಥಿಣಿಯ ಮೌನೇಶ್ವರರು, ಕೊಡೇಕಲ್ ಬಸವಣ್ಣನವರು, ಶಿರ್ಡಿ ಸಾಯಿಬಾಬರು ಮತ್ತು ಶಿಶುನಾಳಶರೀಫರು, ಅಂತೆಯೇ ಉತ್ತರದ ಕಬೀರರು ಸಾಕ್ಷಿಗಳಾಗಿದ್ದಾರೆ. ಹಿಂದೂ ಮುಸ್ಲೀಮರ ಸೌಹಾರ್ದದಿಂದಲ್ಲದೆ ದೇಶಕ್ಕೆ ಕ್ಷೇಮವಿಲ್ಲವೆಂದು ತಿಳಿದ ಈ ಮಹಾತ್ಮರು ಅದರ ಏರ್ಪಾಡಿಗಾಗಿ ತಮ್ಮ ಇಡೀ ಬಾಳನ್ನೇ ಸಮರ್ಪಿಸಿಕೊಂಡದ್ದುಂಟು.

ಶಿಶುನಾಳ ಶರೀಫರು ಇಸ್ಲಾಂ ಮತ್ತು ವೀರಶೈವ ಸಂಸ್ಕೃತಿಗಳ ಸಮ್ಮಿಲನದ ಫಲವಾಗಿ ಮೂಡಿದ ಸುಮಧುರ ಸ್ವರ್ಗೀಯ ಸುಂದರ ಫಲ. ಮುಸ್ಲಿಮರಾಗಿ ಹುಟ್ಟಿ, ಸ್ಮಾರ್ತಗುರುಗಳಿಂದ ದೀಕ್ಷೆ ಪಡೆದು, ವೀರಶೈವ ಸಂಸ್ಕೃತಿಯ ಸಾರವನ್ನುಂಡು, ಅನುಭಾವಿಗಳಾಗಿ, ತತ್ತ್ವಜ್ಞಾನಿಗಳಾಗಿ, ಸಂತಕವಿಗಳಾಗಿ, ಜಾತಿ ಮತಗಳ ಚಿಪ್ಪಿನಿಂದ ಹೊರ ಬಂದು, ಆಕಾಶದೆತ್ತರಕ್ಕೆ ಬೆಳೆದ ಮಹಾತ್ಮರವರು; ಹಿಂದೂ ಮುಸ್ಲಿಮರ ಐಕ್ಯದಿಂದ, ಸರ್ವಧರ್ಮಗಳ ಸಮನ್ವಯದಿಂದ ಮಾತ್ರ ಲೋಕಕ್ಕೆ ಶಾಂತಿ ಸಾಧ್ಯ ಎಂದು ತೋರಿಸಿಕೊಟ್ಟ ಮುಕ್ತಾತ್ಮರವರು. ಹರಿಹರ ಹಜರತ್ ಮಾರ್ಗಗಳ ಗುರಿ ಒಂದೆ ಎಂದು ಸಾರಿ, ಜಾತಿ ಮತ ಪಂಥ ವರ್ಗ ವರ್ಣ ಭೇದಗಳು ಅಪಾಯಕಾರಿ ಎಂದು ಉಪದೇಶಿಸಿದ್ದಲ್ಲದೆ, ಸ್ವಂತ ಜೀವನದ ಮೂಲಕ ಜಗತ್ತಿಗೆ ದಾರಿತೋರಿಸಿದ ಜಗದ್ಗುರು ಅವರು. ಅವರು ಪಾರ್ವತೀಪತಿಯ ಪಾದಕ್ಕೆ ಭಕ್ತಿ ಪದ ಕುಸುಮವನ್ನರ್ಪಿಸುವಂತೆ ಹಜರೇಶಾ ಖಾದರಿಯವರಿಗೂ ಕವಿತಾ ಗೌರವವನ್ನು ಸಲ್ಲಿಸುತ್ತಾರೆ. ಯಾವ ದೇವರಲ್ಲಿಯೂ ಅವರಿಗೆ ಅಗೌರವವಿಲ್ಲ; ಮಹಮ್ಮದ್ ಪ್ರವಾದಿಗಳ ಉಪದೇಶವನ್ನು ಮರೆಯುವುದಿಲ್ಲ. ಜಾತೀಯತೆ, ಪುರೋಹಿತಶಾಹಿ, ಗೊಡ್ಡು ಸಂಪ್ರದಾಯಗಳನ್ನು ಉಗ್ರವಾಗಿ ಖಂಡಿಸುತ್ತಾರೆ. ಹಿಂದೂ ಧರ್ಮದ ಶ್ರೇಷ್ಠ ಮೌಲ್ಯಗಳನ್ನು ಇಸ್ಲಾಂ ಧರ್ಮದ ಮೌಲ್ಯಗಳೊಡನೆ ಸರಿತೂಗಿಸಿಕೊಂಡು, ಭಾರತೀಯರಾಗಿ, ವಿಶ್ವಮಾನವರಾಗಿ, ದೇವಮಾನವರಾಗಿ ಲೋಕವನ್ನೇ ಬೆಳಗಿದ ಮಹಾನುಭಾವರು.

ಆಂಗ್ಲರಂತೆ ಮೊಗಲರು ಎಲ್ಲಿಂದಲೋ ಆಳಲಿಲ್ಲ; ಗಂಡಾಂತರವೊದಗಿದಾಗ ದೇಶ ಬಿಟ್ಟು ಓಡಿಹೋಗಲು ಸಿದ್ಧರಾಗಿರಲಿಲ್ಲ; ಅವರು ಇಲ್ಲಿಯೇ ಆಳಿದರು; ಈ ನೆಲದೊಡನೆ ತಮ್ಮ ಜೀವನವನ್ನು ಸಮೀಕರಿಸಿಕೊಂಡರು. ಸಂಪೂರ್ಣ ಇಸ್ಲಾಮೀಕರಣ ಸಾಧ್ಯವಿಲ್ಲವೆಂದು ತಿಳಿದ ಉದಾರ ಸ್ವಭಾವದ ಅಕ್ಬರನಂಥ ಚಕ್ರವರ್ತಿಗಳು ಕೊಳು ಕೊಡೆಯ ಮೂಲಕ ಇಸ್ಲಾಂ ಹಿಂದೂ ಸಂಸ್ಕೃತಿಗಳ ನಡುವೆ ಸೌಹಾರ್ದ ಸಾಮರಸ್ಯಗಳನ್ನು ಏರ್ಪಡಿಸಿದರು; ಸಾಂಸ್ಕೃತಿಕ ವಿನಿಮಯ ಸಹ ಪ್ರಾರಂಭವಾಯಿತು. ಮುಸ್ಲಿಮರ ತಾಳಿ ಧಾರಣೆ ಹಾಗೂ ಸಮಾಧಿ ಪೂಜೆಗಳಿಗೆ ಹಿಂದೂ ಸಂಸ್ಕೃತಿಯ ಪ್ರಭಾವವೇ ಕಾರಣ; ಭಕ್ತಿಪಂಥದ ಮೇಲೆ ಸೂಫಿ ಪಂಥದ ಪ್ರಭಾವ ಇದ್ದೇ ಇದೆ. ಕ್ರಿಶ್ಚಿಯನ್ ಮತ್ತು ಹಿಂದೂ ಸಂಸ್ಕೃತಿಗಳ ನಡುವೆಯೂ ಇಂಥದೇ ವಿನಿಮಯ ಸಾಗುತ್ತಿದೆ. ಜಗತ್ತಿನ ಎಲ್ಲ ಧರ್ಮಗಳು ಚಾಲನೆಯಲ್ಲಿರುವ ಏಕೈಕ ರಾಷ್ಟ್ರವೆಂದರೆ ಭಾರತ. ಇದು ಹೆಮ್ಮೆಪಡಬಹುದಾದ ಸಂಗತಿ. ಮಠ ಮಸೀದಿ ಚರ್ಚುಗಳನ್ನು ಬಿಡಲು ಯಾರೂ ಸಿದ್ಧರಿಲ್ಲ. ಆದರೆ ಧಾರ್ಮಿಕಾಚರಣೆಗಳನ್ನು ಮಠ ಮಸೀದಿ ಚರ್ಚುಗಳಿಗೆ ಸೀಮಿತ ಗೊಳಿಸುವ ಮೂಲಕ ಖಾಸಗಿಗೊಳಿಸಿ, ಸಾರ್ವಜನಿಕ ಜೀವನದಲ್ಲಿ ಸರ್ವರಿಗೂ ಅನ್ವಯವಾಗಬಹುದಾದ ಏಕರೂಪದ ನೀತಿಸಂಹಿತೆಯನ್ನು ಜಾರಿಗೆ ತಂದಾಗ, ರಾಜಕೀಯ ನಾಯಕರು ಮತೀಯ ಸಂಸ್ಥೆಗಳಿಂದ ದೂರ ಸರಿದಾಗ ಈ ದೇಶದಲ್ಲಿ ಶಾಂತಿ ಭದ್ರತೆಗಳು ನೆಲಸುವಂತಾಗುತ್ತದೆ. ಏಕರೀತಿಯ, ಸಮಾನ ಸ್ವರೂಪದ ತಾತ್ವಿಕಾಂಶಗಳನ್ನು ಮತ್ತು ಜೀವನ ನೀತಿ ಸೂತ್ರಗಳನ್ನು ಗರ್ಭೀಕರಿಸಿಕೊಂಡಿರುವ ಇಸ್ಲಾಂ ಮತ್ತು ಆದಿ ವೀರಶೈವ ಸಂಸ್ಕೃತಿಗಳು ಮಾತ್ರ ಈ ರಾಷ್ಟ್ರಕ್ಕೆ ಆಶಾದೀಪಗಳಾಗಬಹುದೆಂಬ ಭರವಸೆಯನ್ನು ತಾಳಬಹುದಾಗಿದೆ.

*ಯುಗ ಯುಗ ಬೇಕೀ ಮನುಜತೆ*
*ಮಾನವತನವನೆ ಮೀರಿ*
*ದೇವತ್ವವ ಸಂಪಾದಿಸೆ*
*ಸಂಯಮ ಸ್ವರ್ಗಕ್ಕೇರಿ*

*ಇಳಿ ತಂದುದು ಈ ಭೂಮಿಗೆ*
*ಅವತಾರದ ಮೇಲವತಾರ !*
*ಆದುದ್ದಾರಕೆ ಸಾವಿರ ಮಡಿ*
*ಇಹುದಾಗುವ ಉದ್ಧಾರ !*

ಧಾರ್ಮಿಕ

## ವಚನಗಳಲ್ಲಿ ಇಷ್ಟಲಿಂಗಪೂಜೆ

*
-ರುದ್ರಮೂರ್ತಿ ಎಲೆರಾಂಪುರ

*ಸತಿಯ ಕೈಯಲ್ಲಿ ಕೊಟ್ಟುದು ಪ್ರಾಣಲಿಂಗವಲ್ಲ*
*ಸುತನ ಕೈಯಲ್ಲಿ ಕೊಟ್ಟುದು ಪ್ರಾಣಲಿಂಗವಲ್ಲ*
*ಅಲಸಿ ನಾಗವತ್ತಿಗೆಯಲ್ಲಿರಿಸಿದುದು ಪ್ರಾಣಲಿಂಗವಲ್ಲ*
*ತನುವ ಸೋಂಕಿ ವಜ್ರಲೇಪದಂತಿರಬೇಕು*
*ಮನಕರದಲ್ಲಿ ಕೊಟ್ಟ ಪ್ರಾಣಲಿಂಗ ಹಿಂಗಿದರೆ*
*ಅವನಂದೇ ವ್ರತಗೇಡಿ ಕೂಡಲಚೆನ್ನಸಂಗಮದೇವಾ*

-ಚೆನ್ನಬಸವಣ್ಣ, ೩-೩೬೩

ತನ್ನ ದೇಹದ ಮೇಲಿನ ಇಷ್ಟಲಿಂಗವನ್ನು ತೆಗೆದಿಟ್ಟು ಆ ಲಿಂಗಕ್ಕೆ ತನ್ನ ಹೆಂಡತಿ ಮಗನಿಗೆ ಪೂಜಿಸಲು ಹೇಳುವುದು, ಅಥವಾ ಭದ್ರವಾಗಿ ಕರಡಿಗೆಯೊಳಗೆ(ಲಿಂಗದ ಕಾಯಿ) ಕೂರಿಸಿ ಕರಡಿಗೆಯನ್ನೇ ಪೆಟ್ಟಿಗೆ ಅಥವಾ ಕಪಾಟಿನೊಳಗೆ ಇಟ್ಟುಬಿಡುವುದು ಈ ರೀತಿ ಮಾಡಿದರೆ ಅವರ ಮನಸ್ಸಿನಲ್ಲಿ ಲಿಂಗವಿಲ್ಲ ಎನ್ನುತ್ತಾರೆ. ಮರದ ಬಿರುಕಿಗೆ ವಜ್ರವನ್ನು ಕಾಯಿಸಿ ಹಾಕಿದರೆ ಹೇಗೆ ಅಂಟಿಕೊಳ್ಳುತ್ತದೆಯೇ ಹಾಗೆಯೇ ಈ ದೇಹವನ್ನು ಸೋಂಕಿದ ಇಷ್ಟಲಿಂಗವು ದೇಹಕ್ಕೆ ಅಂಟಿಕೊಂಡೇ ಇರಬೇಕು. ಅಂದರೆ ಯಾವಾಗಲೂ ಧರಿಸಿರಬೇಕೆನ್ನುತ್ತಾರೆ. ಇಷ್ಟಲಿಂಗಾದೀಕ್ಷಾ ಸಂಸ್ಕಾರದ ಮೂಲಕ ಪಡೆದ ಇಷ್ಟಲಿಂಗ ಮನಸ್ಸಿನ ಕೈಯಲ್ಲಿ ಇಲ್ಲದೇ ಹೋದರೆ ಅಂತಹವರನ್ನು ವ್ರತಗೇಡಿಗಳು ಎನ್ನುತ್ತಾರೆ.

*ಲಿಂಗವಿಲ್ಲದೆ ನಡೆವರ ಲಿಂಗವಿಲ್ಲದೆ ನುಡಿವರ*
*ಲಿಂಗವಿಲ್ಲದೆ ಉಗುಳ ನುಂಗಿದಡೆ*
*ಅಂದಂದಿಗೆ ಕಿಲ್ಬಿಷವಯ್ಯ*
*ಏನೆಂಬೆನೇನೆಂಬೆನಯ್ಯ?*
*ಲಿಂಗವಿಲ್ಲದೆ ನಡೆವರ ಅಂಗ ಲೌಕಿಕ : ಮುಟ್ಟಲಾಗದು*
*ಲಿಂಗವಿಲ್ಲದೆ ನುಡಿವರ ಶಬ್ದಸೂತಕ : ಕೇಳಲಾಗದು*
*ಲಿಂಗವಿಲ್ಲದೆ ಗಮನಿಸಿದಡೆ ಆ ನಡೆನುಡಿಗೊಮ್ಮೆ ವ್ರತಗೇಡಿ*
*ಕೂಡಲಸಂಗಮದೇವಾ*

- ಬಸವಣ್ಣನವರು, ೧-೬೦೯

ಲಿಂಗವಿಲ್ಲದವರ ಅಂಗ, ಶಬ್ದ, ನಡೆನುಡಿ, ಆಹಾರ, ವಿಹಾರ, ಬದುಕು, ಕಾಯಕ ಇವೆಲ್ಲವೂ ದೋಷಪೂರಿತ ವಾಗಿರುತ್ತದೆ. ಅಂತಹವರನ್ನು ವ್ರತಗೇಡಿಗಳು ಎಂದು ಬಸವಣ್ಣನವರು ಹೇಳಿರುತ್ತಾರೆ.

*ಎಲ್ಲ ಪ್ರಮಥರು ಲಿಂಗವ ಧರಿಸುತ್ತಿರಲು,*
*ನಾನೇನು ಒಲ್ಲೆನೆಂಬುದು*
*ಕರ್ಮದ ಬಲೆಯೊ, ಮಾಯದ ಬಲೆಯೊ*
*ಎಲೆ ಕಪಿಲಸಿದ್ಧಮಲ್ಲಿನಾಥಯ್ಯಾ*
*ನಾ ಧರಿಸಿಕೊಂಬುವೆ ಲಿಂಗವ*
*ನೀ ಕರೆಸಿಕೊಂಬುವನಾಗು ಮತ್ತೋರ್ವನ ನಿನ್ನ ಪೂಜೆಗೆ*
*ನಾ ನಿನ್ನವನಲ್ಲೆಲೆ ದೇವಾ.*

-ಸಿದ್ಧರಾಮೇಶ್ವರರು, ೪-೧೨೭೯

ಎಲ್ಲರೂ ಇಷ್ಟಲಿಂಗವನ್ನು ಧರಿಸಿ ಪೂಜಿಸುತ್ತಿರುವಾಗ ಆದಾಗ ಕರ್ಮದ ಬಲೆಯಲ್ಲಿಯೋ, ಮಾಯದ ಬಲೆ ಯಲ್ಲಿಯೋ ಸಿಲುಕಿ ನಾನು ಲಿಂಗಧಾರಣೆ ಬೇಡವೆಂದಿದ್ದೆ. ಎಲೆ ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಇನ್ನು ಮುಂದೆ ನಾನು ಇಷ್ಟಲಿಂಗವನ್ನು ಧರಿಸಿ ಪೂಜೆ ಮಾಡಿಕೊಳ್ಳುತ್ತೇನೆ. ಮತ್ತೋರ್ವನನ್ನು ಕರೆದುಕೊಂಡು ನಿನ್ನ ಪೂಜೆ ಮಾಡಿಸಿಕೋ. ನಾನು ನಿನ್ನವನಲ್ಲ ಎಲೆ ದೇವಾ ಎಂದು ಹೇಳಿದ್ದಾರೆ.

*ಗುರುಕಾರುಣ್ಯ ಕಟಾಕ್ಷದಲ್ಲಿ ಉತ್ಪನ್ನವಾದ ಅಜಾತಂಗೆ*
*ಜಾತಿಸೂತಕ ಜನನಸೂತಕ ಪ್ರೇತಸೂತಕ*
*ರಜಸ್ಸೂತಕ ಉಚ್ಚಿಷ್ಟ ಸೂತಕಗಳಿಲ್ಲ*
*ಉಂಟೆಂಬುವರಿಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ*
*ಪಾದೋದಕ ಪ್ರಸಾದವಿಲ್ಲ ಕೂಡಲ ಚೆನ್ನಸಂಗಮದೇವ*

-ಚೆನ್ನಬಸವಣ್ಣನವರು, ೩-೧೬೮

ಗುರುವಿನ ಕರುಣದಿಂದ ಹುಟ್ಟಿ ಲಿಂಗ ಜಂಗಮವನ್ನು ಆರಾಧಿಸಿದ ಬಳಿಕ ಅವರಿಗೆ ಯಾವುದೇ ಸೂತಕಗಳಿಲ್ಲ, ಸೂತಕಗಳನ್ನು ಆಚರಿಸಬಾರದು ಎನ್ನುತ್ತಾರೆ. ಹಾಗೆ ಆಚರಿಸಿದವರಿಗೆ ಗುರುಲಿಂಗ ಜಂಗಮ ಪಾದೋದಕ ಪ್ರಸಾದ ಅವರಿಗೆ ನಿಷ್ಫಲವಾಗುತ್ತದೆ ಎಂದು ಹೇಳುತ್ತಾರೆ ಚೆನ್ನಬಸವಣ್ಣನವರು. ❑

* 'ಅನುಭವ ಮಂಟಪ' 4ನೇ ಅಡ್ಡರಸ್ತೆ, ಬಸವೇಶ್ವರ ಬಡಾವಣೆ, ಕ್ಯಾತ್ಸಂದ್ರ ತುಮಕೂರು-೫೭೨ ೧೦೪.



ವಿಚಾರ

## ಕನ್ನಡ ಅಭಿವೃದ್ಧಿ ಮತ್ತು ಸಂಸ್ಕೃತಿ

*
-ಡಾ|| ವಿಜಯದೇವಿ

*ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸ*
*ಜ್ಜೆರೆಯೊಳ್ ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಂಬುಕೆಯ್ ನಂಬಿದ*
*ರ್ಗೆರವಟ್ಟಾಗಿರುಶಿಷ್ಟರಂ ಪೊರೆ ಎನುತ್ತಿಂತೆಲ್ಲಮಂ ಪಿಂತೆ ತಾ*
*ನೆರೆದಳ್ ಪಾಲೆರೆವಂದು ತೊಟ್ಟು ಕಿವಿಯೊಳ್*
*ಲಕ್ಷ್ಮೀಧರಾಮಾತ್ಯನಾ*

-ಲಕ್ಷ್ಮೀಧರಾಮಾತ್ಯನ ಶಾಸನ

ಕನ್ನಡದ ಒಬ್ಬಳು ತಾಯಿ ತನ್ನ ಮಗುವಿಗೆ ಎದೆಹಾಲು ಕುಡಿಸುತ್ತಿದ್ದಳು. ಕೆರೆ ಕಟ್ಟಿಸು, ಬಾವಿ ತೋಡಿಸು, ಅನ್ನ ಛತ್ರಗಳನ್ನು ಮಾಡಿಸು, ವಯೋವೃದ್ಧ ರನ್ನು, ಅನಾಥರನ್ನು ರಕ್ಷಿಸು. ಗೆಳೆಯರಿಗೆ ಸಖನಾಗಿರು. ನಂಬಿದವರಿಗೆ ಇಂಬಾಗಿರು. ನೋಡಿ ಈ ಹೆಣ್ಣು ತನ್ನ ಮಗುವಿಗೆ ಏನು ಹಾರೈಸುತ್ತಿದ್ದಾಳೆ. ನೀನು ಶ್ರೀಮಂತ ಆಗು, ರಾಜ ಆಗು, ಚಕ್ರವರ್ತಿ ಆಗು ಎಂದು ಹಾರೈಸಲಿಲ್ಲ. ಕೆರೆ, ಬಾವಿ ಕಟ್ಟಿಸು, ಅನ್ನ ಛತ್ರ ಮಾಡಿಸು, ಮೊರೆಯಿಟ್ಟು ಬಂದವರನ್ನು ಕಾಪಾಡು ಎಂದು ನಮ್ಮ ಸಂಸ್ಕೃತಿಯ ಸಾರವನ್ನು ತಿಳಿಸುತ್ತಿದ್ದಳು. ಈ ಎಲ್ಲ ಕೆಲಸಗಳನ್ನು ಮಾಡಬೇಕಾದರೆ ಆ ಮಗು ಏನಾಗಿರಬೇಕು. ಅಪಾರ ಶ್ರೀಮಂತ ಇರಬೇಕು. ಬರಿ ಶ್ರೀಮಂತಿಕೆ ಉಪಯೋಗ ಇಲ್ಲ. ಧೀರ ಇರಬೇಕು. ಧೀರ ಇದ್ದರಾಗಲಿಲ್ಲ. ಹೃದಯ ವಂತಿಕೆ, ಔದಾರ್ಯ ಇರಬೇಕು. ಮಹಾಕವಿ ಪಂಪ ಹೇಳುವಂತೆ ತ್ಯಾಗಿಯಾಗಿರಬೇಕು. ಇದು ಕನ್ನಡ ಸಂಸ್ಕೃತಿ. ಇದು ಕನ್ನಡಾಭಿಮಾನ. ಇಂತಹವರಿಂದ ಕನ್ನಡ ಭಾಷೆ ಬೆಳೆಯುತ್ತದೆ. ಕರ್ನಾಟಕ ಕಾವೇರಿಯಿಂದ ಗುಜರಾತದವರೆಗೆ ಒರಿಸ್ಸಾದವರೆಗೆ ಇತ್ತು. ಗೋದಾವರಿ ನದಿಯ ದಡದಲ್ಲಿ ಹರ್ಷವರ್ಧನನನ್ನು ಯುದ್ಧದಲ್ಲಿ ಸೋಲಿಸಿ ಹಿಂದಕ್ಕೆ ಕಳುಹಿಸಿದ ಧೀರ ಪುಲಿಕೇಶಿಯ ನಾಡು ನಮ್ಮದು.

*ಸುಭಟರ್ಕಳ್ ಕವಿಗಳ್ ಸಂ*
*ಪ್ರಭುಗಳ್ ಚೆಲುವರ್ಕಳ್ ಅಭಿಜನರ್ಕಳ್ ಗುಣಿಗಳ್*
*ಅಭಿಮಾನಿಗಳ್ ಅತ್ಯುಗ್ರರ್*
*ಗಭೀರಚಿತ್ತರ್ ವಿವೇಕಿಗಳ್ ನಾಡವರ್ಗಳ್*

ಕವಿರಾಜಮಾರ್ಗಕಾರ ಕನ್ನಡಿಗರನ್ನು ವರ್ಣಿಸಿರುವುದು. ಹೀಗೆ ನಮ್ಮಲ್ಲಿ ಈಗ ಈ ಸದ್ಗುಣಗಳೆಲ್ಲ ಇವೆಯೇ? ನಮ್ಮ ಕನ್ನಡ ನಾಡು, ಭಾಷೆಯನ್ನು ನಾವು ಎಷ್ಟರಮಟ್ಟಿಗೆ ಬೆಳೆಸಿದ್ದೇವೆ? ಕನ್ನಡಾಭಿಮಾನ ಎಂದರೇನು? ಮರಾಠಿ ಯನ್ನು ನಾವೂ ಕಲಿಯುವುದು ನಮ್ಮ ಕನ್ನಡವನ್ನು ಅವರಿಗೂ ಕಲಿಸುವುದು, ಇಂಗ್ಲೀಷ್‌ನವರು ಭಾರತಕ್ಕೆ ಬಂದು ನಮಗೆ ಇಂಗ್ಲೀಷ್ ಕಲಿಸಿದರು. ನಮ್ಮ ಕನ್ನಡ ಅವರು ಕಲಿತರು.

ಒಬ್ಬ ರೈತ ಕೆರೆಯಲ್ಲಿ ಮುಖ ತೊಳೆಯುತ್ತ ಇದ್ದ. ಅಲ್ಲಿ ಒಂದು ಚೇಳು ನೀರಿನಲ್ಲಿ ಮುಳುಗುತ್ತಿತ್ತು. ಈ ರೈತ ಪಾಪ ಚೇಳು ಸಾಯುತ್ತದಲ್ಲ. ಅದನ್ನು ಉಳಿಸಬೇಕು ಎಂದು ಬೊಗಸೆಯಲ್ಲಿ ಅದನ್ನು ನೀರಿನೊಂದಿಗೆ ಎತ್ತಿಕೊಂಡ. ಅದು ಕುಟುಕಿತು. ಉರಿ ತಾಳಲಾರದೆ ಕೈಚೆಲ್ಲಿದ. ಅದು ಅಂಗೈಗಳಿಗೆ ಕುಟುಕಿತು. ನೋವಾಯಿತು. ಬೊಗಸೆ ನೀರು ಚೆಲ್ಲಿದ. ಚೇಳು ಮತ್ತೆ ನೀರಿನೊಳಗೆ ಬಿತ್ತು. ಮತ್ತೆ ಚೇಳಿನ ಕಡೆಗೆ ನೋಡಿದ. ಅಯ್ಯೋ ಚೇಳು ಸಾಯುತ್ತದಲ್ಲ ಎಂದು ಅದನ್ನು ಬೊಗಸೆಯಲ್ಲಿ ಎತ್ತಿಕೊಂಡ. ಅದು ಮತ್ತೆ ನೀರಿನಲ್ಲಿ ಬಿದ್ದು ಚೇಳು ಮತ್ತೆ ನೀರಿನಲ್ಲಿ ಮುಳುಗತೊಡಗಿತು. ಇವನು ಮತ್ತೆ ಚೇಳಿನ ಪ್ರಾಣ ಉಳಿಸಲು ಮುಂದಾದ. ಇದನ್ನು ನೋಡುತ್ತಿದ್ದ ಒಬ್ಬ ಅಧ್ಯಾಪಕರು ಈ ರೈತನಿಗೆ ಹೇಳಿದರು. ಅದು ಚೇಳು. ಕುಟುಕುವುದೇ ಅದರ ಸ್ವಭಾವ. ಸಾಯಲಿ ಬಿಡು ಎಂದರು. ಅದಕ್ಕೆ ರೈತ ಹೇಳಿದ. ಸ್ವಾಮಿ ಅದು ಸಾಯುತ್ತಿದೆ ಅದರ ಪ್ರಾಣ ಉಳಿಯಬೇಕು. ಅದಕ್ಕೆ ಕುಟುಕುವುದು ಗೊತ್ತು. ಅದರ ಪರಿಣಾಮ ಏನಾಗುತ್ತದೆ ಎಂದು ಅದಕ್ಕೆ ಗೊತ್ತಿಲ್ಲ. ನಾನು ಕನ್ನಡ ಸಂಸ್ಕೃತಿ ಗೊತ್ತಿರುವ ಮನುಷ್ಯ. ನನಗೆ ಚೇಳಿನ ಪ್ರಾಣ ಉಳಿಯುವುದು ಮುಖ್ಯ ನನಗೆ ನೋವಾಗುವುದು ಮುಖ್ಯವಲ್ಲ. ಇದು ಕನ್ನಡಿಗರ ಹೃದಯ ವಂತಿಕೆ. ತನಗೆ

* ಪ್ರಧಾನ ಸಂಪಾದಕರು, ಕನ್ನಡ ಅಧ್ಯಯನ ವಿಭಾಗ, ಪೆರೂರ್ ಗುಂಡೆರಾವ್ ಬಿಲ್ಡಿಂಗ್, ರಾಮನಗರ ವಿಜಾಪುರ-586 103.

ನೋವಾದರೂ ಇನ್ನೊಂದು ಜೀವಿಯೂ ಬದುಕಬೇಕು ಅದು ಸಾಯಬಾರದು. ಈ ಸೃಷ್ಟಿಯಲ್ಲಿ ಎಲ್ಲ ಜೀವರಾಶಿಗಳಿಗೂ ಬದುಕುವ ಹಕ್ಕು ಇದೆ ಎಂದು ತಿಳಿದವನು ರೈತ.

ಕನ್ನಡಿಗರು ತಾವು ಉಪವಾಸವಿದ್ದರೂ ಅತಿಥಿ ಸತ್ಕಾರದಲ್ಲಿ ಮುಂದು. ಅವರ ಹೃದಯವಂತಿಕೆ ದೊಡ್ಡದು. ಕನ್ನಡ ಸಂಸ್ಕೃತಿ ಎಂದರೆ ಏನು? ತಿಳಿದುಕೊಳ್ಳೋಣ. ನಮ್ಮ ಆದಿ ಕವಿ ಪಂಪ ಹೇಳುತ್ತಾನೆ ಕೇಳಿ. ಕನ್ನಡ ಸಂಸ್ಕೃತಿ ಎಂದರೇನು? ಕನ್ನಡಾಭಿಮಾನ ಎಂದರೇನು? ಮಹಾಕವಿ ಪಂಪ ಹುಟ್ಟಿದ್ದು ಆಂಧ್ರದಲ್ಲಿ, ಬೆಳೆದುದು ಅಣ್ಣಿಗೇರಿಯಲ್ಲಿ, ಕವಿಚಕ್ರವರ್ತಿಯಾಗಿದ್ದು ಅರಿಕೇಸರಿ ರಾಜನಲ್ಲಿ. ಆದರೆ ಆತ ನೆನೆಯುತ್ತಿರುವುದು ಬನವಾಸಿಯ ಕನ್ನಡಿಗರನ್ನು,

***ಆರಂಕುಶವಿಟ್ಟೊಡಂ ನೆನೆವುದೆನ್ನ ಮನಂ***
***ಬನವಾಸಿದೇಶಮಂ***
***ಚಾಗದ ಭೋಗದಕ್ಕರದ ಗೇಯದ***
***ಗೊಟ್ಟಿಯಲಂಪಿನಿಂಪುಗ***
***ಳ್ಗಾಗರಮಾದ ಮಾನಿಸರೆ ಮಾನಿಸರಂತವರಾಗಿ ಪುಟ್ಟಲೇ***
***ನಾಗಿಯುಮೇನೋ ತೀರ್ದಪುದೇ ತೀರದೊಡಂ***
***ಮರಿದುಂಬಿಯಾಗಿ ಮೇಣ್***
***ಕೋಗಿಲೆಯಾಗಿ ಪುಟ್ಟುವುದು ನಂದನದೊಳ್***
***ವನವಾಸೀ ದೇಶದೊಳ್***

ನಾಡು, ನುಡಿಯ ಬಗೆಗೆ ಅಭಿಮಾನ, ಪ್ರೀತಿಯನ್ನು ಪಂಪ ನಮಗೆ ತಿಳಿಸಿಕೊಟ್ಟಿದ್ದಾನೆ. ಕಿಟ್ಟೆಲ್, ಇ.ಪಿ. ರೈಸ್ ಕ್ರೈಸ್ತ ಪಾದ್ರಿಗಳು. ಕ್ರೈಸ್ತ ಧರ್ಮಪ್ರಚಾರಕ್ಕಾಗಿ ಇಲ್ಲಿ ಬಂದರು. ಆದರೆ ಅವರು ಕನ್ನಡ ಭಾಷೆ, ಸಾಹಿತ್ಯಕ್ಕೆ ನೀಡಿದ ಕೊಡುಗೆ ಅಪಾರವಾದುದು. ಒಬ್ಬರು ಇಂಗ್ಲೀಷ್–ಕನ್ನಡ ನಿಘಂಟು ಬರೆದರು. ಇನ್ನೊಬ್ಬರು ಹಳ್ಳಿಹಳ್ಳಿ ತಿರುಗಿ ನಮ್ಮ ಎಲ್ಲ ಕನ್ನಡ ಶಾಸನಗಳನ್ನು ಇಂಗ್ಲೀಷ್ ಭಾಷೆಗೆ ಭಾಷಾಂತರಿಸಿದರು. ಎಪಿಗ್ರಾಫಿಕಾ ಇಂಡಿಕಾ ಪ್ರಕಟಿಸಿದರು. ನಮ್ಮಲ್ಲಿ ಎಷ್ಟೋ ಜನರು ಕನ್ನಡ ಶಾಸನಗಳನ್ನು ನೋಡಿಲ್ಲ. ಈ ಶಾಸನಗಳನ್ನು ಓದುವುದಿರಲಿ ನಮ್ಮ ಪ್ರಾಚೀನ ಕನ್ನಡ ಅಕ್ಷರ ಹೇಗಿತ್ತು ಎಂಬುದು ಗೊತ್ತಿಲ್ಲ. ನಾವೆಲ್ಲ ನಮ್ಮ ಮಕ್ಕಳನ್ನು ಕಾನ್ವೆಂಟ್ ಶಾಲೆಗೆ ಸೇರಿಸುತ್ತೇವೆ. ಇಂಗ್ಲೀಷ್ ಕಲಿಸಲು ನಮ್ಮ ಮಕ್ಕಳಿಗೆ ಪ್ರೋತ್ಸಾಹಿಸುತ್ತೇವೆ. ಇಂಗ್ಲೀಷ್ ಇಲ್ಲದೆ ಹೋದರೆ ಜೀವನವೇ ಇಲ್ಲ. ಕೆಲಸ ಸಿಗುವುದಿಲ್ಲ ಮಾತನಾಡುತ್ತೇವೆ. ಆದರೆ ಇಂಗ್ಲೀಷ್ ವಿದ್ವಾಂಸರಾದ ಕಿಟೆಲ್, ರೈಸ್ ಅವರು ಕನ್ನಡ ಕಲಿತರು. ಕನ್ನಡ ಭಾಷೆ, ಶಾಸನ, ಸಾಹಿತ್ಯ, ಸಂಸ್ಕೃತಿ ಇವನ್ನೆಲ್ಲ ಅವರು ತಿಳಿದುಕೊಂಡರು. ಕಿಟೆಲ್ ಅವರು ತಮ್ಮ ನಿಘಂಟಿನಲ್ಲಿ ೫೦೦೦ ಗಾದೆಗಳನ್ನು ಸಂದರ್ಭೋಚಿತವಾಗಿ ಉದಾಹರಿಸಿದ್ದಾರೆ. ನಮಗೆ ಎಷ್ಟು ಗಾದೆಗಳು ಗೊತ್ತಿವೆ? ನಮಗೆ ಎಷ್ಟು ಕನ್ನಡ ಶಬ್ದಾರ್ಥ ಗೊತ್ತಿದೆ. ನಮಗೆ ಕನ್ನಡ ಕಾವ್ಯಗಳ, ಕವಿಗಳ ಎಷ್ಟು ಹೆಸರು ಗೊತ್ತಿದೆ. ಕನ್ನಡ ಅಭಿಮಾನವನ್ನು, ಕನ್ನಡ ಸಂಸ್ಕೃತಿ ಪ್ರಸಾರವನ್ನು ಕಿಟೆಲ್, ಇ.ಪಿ. ರೈಸ್ ಅವರು ಕಳೆದ ಶತಮಾನದಲ್ಲಿಯೇ ನಮಗೆ ತೋರಿಸಿಕೊಟ್ಟಿದ್ದಾರೆ. ಅವರಿಗೆ ಕನ್ನಡ ಭಾಷೆ, ಸಂಸ್ಕೃತಿ ಮೇಲಿರುವ ಪ್ರೀತಿ ನಮಗೆ ಯಾಕೆ ಇಲ್ಲ?

ಕನ್ನಡ ಭಾಷೆಯ, ಅಭಿಮಾನದ ಕೆಲಸ ಎಂದರೆ ಏನು? ಇಂಗ್ಲೆಂಡ್ ಒಂದು ಪುಟ್ಟ ದೇಶ. ಅವರು ವ್ಯಾಪಾರಕ್ಕೆಂದು ಭಾರತಕ್ಕೆ ಬಂದು ಪ್ರಪಂಚವನ್ನೆಲ್ಲ ಆಳಿದರು. ಅವರ ಭಾಷೆಯನ್ನು ನಮಗೂ ಕಲಿಸಿದರು. ಇವತ್ತಿಗೂ ನಮಗೆ ಇಂಗ್ಲೀಷ್ ಭಾಷೆ ಹಿರಿದು ಎಂಬ ಭಾವನೆ ಇದೆ. ಕನ್ನಡದಲ್ಲಿ ವಿಜ್ಞಾನ ಸಾಹಿತ್ಯ ಇಲ್ಲ. ಹೀಗೆ ನಮ್ಮಲ್ಲಿ ತಪ್ಪುತಪ್ಪು ಕಲ್ಪನೆಗಳಿವೆ. ಸಿ.ವಿ.ರಾಮನ್ ಅವರು ವಿಕಿರಣವಾದ ಕಂಡು ಹಿಡಿದು ನೊಬೆಲ್ ಪ್ರಶಸ್ತಿ ಪಡೆದರು. ಅವರು ಓದಿದ್ದು ಕನ್ನಡದಲ್ಲಿ, ಬೆಂಗಳೂರಿನಲ್ಲಿ ಕುವೆಂಪು ಅವರಿಗೂ ಹೀಗೆಯೇ ಭಾವನೆ ಇತ್ತು. ಅವರು ಇಂಗ್ಲೀಷ್‌ನಲ್ಲಿ ಪದ್ಯ ಸಂಕಲನ ಸಿದ್ಧಪಡಿಸಿದ್ದರು. ಅದನ್ನು ಜೇಮ್ಸ್ ಎಚ್. ಕಸಿನ್ಸ್ ಅವರಿಗೆ ತೋರಿಸಿದಾಗ ಅವರು ಕೇಳಿದರು.

ಕಸಿನ್ಸ್–ಏನಿದೆಲ್ಲ ಕಗ್ಗ ? ಕನ್ನಡದಲ್ಲಿ ಏನಾದರೂ ಬರೆದಿರುವಿರಾ?

ಕುವೆಂಪು– ಕನ್ನಡದಲ್ಲಿ ಇಂಗ್ಲೀಷ್‌ನಲ್ಲಿ ಸಾಧ್ಯವಾಗುವಂತೆ ಉದಾತ್ತ ಭಾವನೆಗಳನ್ನು, ಉನ್ನತ ಆಲೋಚನೆಗಳನ್ನು ಹೇಳಲು ಸಾಧ್ಯವಿಲ್ಲ. ಕಸಿನ್ಸ್–ನೀವು ಇಂಗ್ಲೀಷ್‌ನಲ್ಲಿ ಸೃಜನ ಸಾಹಿತ್ಯ ಸೃಷ್ಟಿ ಮಾಡಲಾರಿರಿ. ಅದನ್ನು ಓದುವ ನಮಗೆ ಗೊತ್ತಾಗುತ್ತದೆ. ಅದೆಂತಹ ನಗೆಪಾಟಲಸಾಹಿತ್ಯ ಎಂದು ಅವರು ಹೇಳಿದರು. ಆಗ ಕುವೆಂಪು ಅವರಿಗೆ ತಮ್ಮ ಕನ್ನಡ ಭಾಷೆಯ ಬಗೆಗೆ ಅಭಿಮಾನ ಹುಟ್ಟಿತು.

***೧. ಬಾರಿಸು ಕನ್ನಡ ಡಿಂಡಿಮವ, ಓ ಕರ್ನಾಟಕ ಹೃದಯಶಿವ***

***೨. ಎಲ್ಲಾದರೂ ಇರು ಎಂತಾದರೂ ಇರು, ಎಂದೆಂದಿಗೂ ನೀ ಕನ್ನಡವಾಗಿರು(ಕುವೆಂಪು)***

***೩. ಹಚ್ಚೇವು ಕನ್ನಡದದೀಪ, ಕರುನಾಡ ದೀಪ ಸಿರಿನುಡಿಯ ದೀಪ(ಕರ್ಕಿ)***

***೪. ಹೊತ್ತಿತೊ, ಹೊತ್ತಿತೊ ಕನ್ನಡದ ದೀಪ, ತೊಲಗಿತೊ, ತೊಲಗಿತೊ ಶತಮಾನದ ಶಾಪ (ಸಿದ್ಧಯ್ಯ ಪುರಾಣಿಕ)***

ಹೀಗೆ ನಮ್ಮ ಕವಿಗಳು ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿಯ ವಿಚಾರವನ್ನು ನಮಗೆ ಕಲಿಸಿದ್ದಾರೆ. ನಮಗೆ ನಮ್ಮ ಭಾಷೆ ಬಗೆಗೆ ಮೊದಲು ಪ್ರೀತಿ ಬೇಕು. ಅಭಿಮಾನ ಬೇಕು. ನಮ್ಮ ಮನೆಯಲ್ಲಿ ಕನ್ನಡ ಭಾಷೆಯನ್ನು ಮಾತನಾಡಬೇಕು. ನಮ್ಮ ಮಕ್ಕಳಿಗೆ ಕನ್ನಡ ಕಲಿಸಬೇಕು. ಅಕ್ಕಪಕ್ಕದವರಿಗೆ ಕನ್ನಡ ಕಲಿಸಬೇಕು.

***ಅವಳ ತೊಡಿಗೆ ಇವಳಿಗಿಟ್ಟು***
***ಇವಳ ತೊಡಿಗೆ ಅವಳಿಗಿಟ್ಟು***
***ಸೊಬಗ ನೋಡಬಯಸಿದೆ***

ಬಿ.ಎಂ. ಶ್ರೀಕಂಠಯ್ಯನವರು ಭಾಷೆಯ ಕೊಳುಕೊಡೆಯನ್ನು ನಮಗೆ ಕಲಿಸಿದ್ದಾರೆ. ಅವರ ರಂಗೋಲಿಯನ್ನು ನಾವು ಕಲಿಯುವ ನಮ್ಮ ಅಡಿಗೆಯನ್ನು ಅವರಿಗೆ ಕಲಿಸುವ ಪ್ರೀತಿ ಮನುಷ್ಯನ ಬಾಳಿನಲ್ಲಿ ಒಂದು ದೊಡ್ಡ ಶಕ್ತಿ.

ಅಭಿಮಾನ ಎಂದರೇನು ? ಗಾಂಧೀಜಿಯವರು ಪ್ರಿಟೋರಿಯಾದಿಂದ ರೈಲುಪ್ರಯಾಣ ಮಾಡುತ್ತಿದ್ದರು. ಅವರು ಮೊದಲ ದರ್ಜೆ ಟಿಕೆಟ್ ಕೊಂಡಿದ್ದರು. ಒಳಗೆ ಬಂದ ಟಿಕೆಟ್ ಕಲೆಕ್ಟರ್ ಹೋಗುತ್ತಿರುವ ರೈಲಿನಿಂದಲೇ ಅವರನ್ನು ಹೊರಗೆ ದಬ್ಬಿದ. ಕರಿಯರಿಗೆ ದುಡ್ಡುಕೊಟ್ಟರೂ ಮೊದಲ ದರ್ಜೆಯಲ್ಲಿ ಪ್ರಯಾಣ ಮಾಡುವ ಹಕ್ಕಿಲ್ಲ. ಕರಿಯರು ಜೀತ ಮಾಡಲು, ಸೇವೆ ಮಾಡಲು ಮಾತ್ರ ಇರುವವರು ಇದು ಬ್ರಿಟಿಷರು ತಿಳಿದಿದ್ದ ನಿಲುವು. ಸದ್ಯ ಗಾಂಧೀಜಿಯವರ ಪ್ರಾಣಕ್ಕೆ ಏನೂ ಅಪಾಯವಾಗಲಿಲ್ಲ. ಅವರ ಶರೀರದ ಕೈಕಾಲು ಮೂಳೆ ಮುರಿಯಲಿಲ್ಲ. ಆದರೆ ಅವರ ಅಭಿಮಾನಕ್ಕೆ ಬಹಳ ಪೆಟ್ಟಾಯಿತು. ಬ್ರಿಟಿಷರ ವಿಚಾರದಲ್ಲಿ ಅವರ ಮನಸ್ಸು ಮುರಿಯಿತು. ಆಗ ಅವರು ನಿರ್ಧಾರ ಮಾಡಿದರು. ತಪ್ಪು ಏನಿಲ್ಲದಿದ್ದರೂ ನೀವು ನಮ್ಮನ್ನು ನಿಮ್ಮ ದೇಶದಲ್ಲಿ ಬದುಕಲು ಬಿಡುವುದಿಲ್ಲ. ಬ್ರಿಟಿಷರೆ ನಿಮ್ಮನ್ನು ಇಂಡಿಯಾದೇಶದಿಂದಲೇ ಓಡಿಸುತ್ತೇನೆ ಎಂದು ನಿರ್ಧಾರ ಮಾಡಿದರು. ಅದರಂತೆ ಭಾರತದಿಂದ ಬ್ರಿಟೀಷರು ಹೋಗುವವರೆಗೂ ಹೋರಾಟ ಮಾಡಿದರು. ಇದು ಭಾರತ ದೇಶ ಕುರಿತ ಅಭಿಮಾನ. ಕನ್ನಡದ ಇಮ್ಮಡಿ ಪುಲಿಕೇಶಿಯು ಕ್ರಿ.ಶ. ೬೧೨ರಲ್ಲಿ ಉತ್ತರ ಭಾರತದ ಹರ್ಷವರ್ಧನ ಚಕ್ರವರ್ತಿಯನ್ನು ಯುದ್ಧದಲ್ಲಿ ಸೋಲಿಸಿ ನರ್ಮದಾ ನದಿ ತೀರದಿಂದ ಆಚೆಗೆ ಕಳುಹಿಸಿದನು. ಇದು ಕನ್ನಡಾಭಿಮಾನ. ವಿಶ್ವವಿಖ್ಯಾತ ಪಟ್ಟದಕಲ್ಲಿನ ಮಲ್ಲಿಕಾರ್ಜುನ ದೇವಾಲಯವನ್ನು ಕಟ್ಟಿಸಿದ ಲೋಕ ಮಹಾದೇವಿ, ತ್ರೈಲೋಕ್ಯ ಮಹಾದೇವಿಯವರು ವಿಶ್ವಪರಂಪರೆಯಲ್ಲಿ ಉಳಿಯುವಂತಹ ದೇವಾಲಯಗಳನ್ನು ನಿರ್ಮಾಣ ಮಾಡಿಸಿದಳು. ಹಳೆಬೀಡು ಬೇಲೂರಿನಲ್ಲಿ ಶಾಂತಲಾ ದೇವಿಯು ಸರ್ವರ ವಾಸ್ತುಶಿಲ್ಪ ದೇವಾಲಯಗಳನ್ನು ನಿರ್ಮಾಣ ಮಾಡಿಸಿದಳು. ಇವು ವಿಶ್ವದಲ್ಲಿಯೇ ಪ್ರಸಿದ್ಧವಾದ ವಾಸ್ತುಶಿಲ್ಪಗಳು. ಕನ್ನಡದ ಸಿ.ವಿ.ರಾಮನ್ ನೊಬೆಲ್ ಪ್ರಶಸ್ತಿ ಪಡೆದರು. ಇದು ಕನ್ನಡಾಭಿಮಾನ. ಕನ್ನಡದ ಸುಧಾಮೂರ್ತಿಯವರು ಪ್ರಪಂಚದಾದ್ಯಂತ ಇನ್ಫೋಸಿಸ್‌ಸಂಸ್ಥೆಗಳನ್ನು ಸ್ಥಾಪಿಸಿ ಸಾವಿರಾರು ಉದ್ಯೋಗಿಗಳಿಗೆ ಕೆಲಸ ಕೊಟ್ಟರು. ಮಹಿಳೆಯೂ ಇಂಜಿನಿಯರ್ ಆಗಿ ಕೆಲಸ ಮಾಡಬಲ್ಲಳು ಎಂಬುದನ್ನು ಮಾಡಿ ತೋರಿಸಿದರು. ಬೆಳಗಾಂ ಜಿಲ್ಲೆಯ ವಿದ್ಯಾ ಮರಕುಂಬಿ ಯವರು ದೇಶ ವಿದೇಶಗಳಲ್ಲಿಯೂ ಸಕ್ಕರೆ ಕಾರ್ಖಾನೆಗಳನ್ನು ತೆರೆದರು. ಕಿರಣ್ ಮಜುಮ್ದಾರ್ ಅವರು ದೇಶವಿದೇಶಗಳಲ್ಲಿ ಬಯೋಟೆಕ್ ಸ್ಥಾಪನೆ ಮಾಡಿದರು. ಸಾವಿರಾರು ಉದ್ಯೋಗಿಗಳಿಗೆ ಕೆಲಸ ಕೊಟ್ಟರು. ಬೆಂಗಳೂರಿನ ಕನ್ನಡಿಗರು ಅಮೆರಿಕಾದ ಅಧ್ಯಕ್ಷ ಬರಾಕ್ ಒಬಾಮ ತಿರುಗಿ ನೋಡುವಂತೆ ಬೆಳೆದರು. ಇದು ಕನ್ನಡಾಭಿಮಾನ.

ಹಿಂದೆ ನಡೆದ ಒಂದು ಘಟನೆಯ ಕತೆ ಹೇಳುತ್ತೇನೆ. ಒಬ್ಬ ಹೊರದೇಶದ ಪೈಲ್ವಾನ್ ಮೈಸೂರು ರಾಜ್ಯಕ್ಕೆ ಬಂದ. ಮೈಸೂರಿನ ಎಲ್ಲ ಜಟ್ಟಿಗಳನ್ನು ಸೋಲಿಸಿ ಕುಣಿಯುತ್ತಿದ್ದ.

ನಾಲ್ವಡಿ ಕೃಷ್ಣರಾಜಒಡೆಯರಿಗೆ ಬಹಳ ಹಳಹಳಿಯಾಯಿತು. ಯಾರೂ ಒಬ್ಬ ಜಟ್ಟಿ ನಮ್ಮ ಕನ್ನಡರಾಜ್ಯದಲ್ಲಿ ಇಲ್ಲವೆ? ಆಗ ಒಬ್ಬ ಅಡಿಗೆಯವ ಕುಸ್ತಿ ಅಖಾಡಕ್ಕೆ ಇಳಿದ. ಜಟ್ಟಿ ಗಹಗಹಿಸಿ ನಗತೊಡಗಿದ. ಈ ಅಡಿಗೆಯವನು ಏನು ಕುಸ್ತಿ ಮಾಡುತ್ತಾನೆ ಎಂದು ಇವನನ್ನು ತೆಗೆದು ಒಗೆಯಲು ಬಂದ. ಇವನು ತಪ್ಪಿಸಿಕೊಂಡು ಓಡತೊಡಗಿದ. ಎಲ್ಲರೂ ನಗತೊಡಗಿದರು. ಕೊನೆಗೆ ಈ ಅಡಿಗೆಯವ ಸಮಯ ಸಾಧಿಸಿ ಒಂದು ಕ್ಷಣದಲ್ಲಿ ಆ ಜಟ್ಟಿಯ ಎರಡೂತೋಳು ಹಿಡಿದು ಮೇಲಕ್ಕೆ ಎತ್ತಿ ಬಿಟ್ಟ. ಎಷ್ಟು ಹೊತ್ತಾದರೂ ಕೆಳಗೆ ಇಳಿಸಲಿಲ್ಲ. ಜಟ್ಟಿಯು ಅಡಿಗೆಯವನ ಹಿಡಿತ ಬಿಡಿಸಿಕೊಳ್ಳಲಾರದೆ ಒದ್ದಾಡಿದ. ಅವನಿಗೆ ತೋಳುಬಿಡಿಸಿಕೊಳ್ಳುವ ಪಟ್ಟು ಯಾರೂ ಹೇಳಿಕೊಟ್ಟಿರಲಿಲ್ಲ. ಜಟ್ಟಿಯನ್ನು ಅಂಗಾತ ತೆಗೆದು ನೆಲಕ್ಕೆ ಒಗೆದುಬಿಟ್ಟ. ಬಿದ್ದ ರಭಸಕ್ಕೆ ಬಹಳ ಪೆಟ್ಟಾಗಿ ಅವನಿಗೆ ಮೇಲೇಳಲು ಆಗಲಿಲ್ಲ. ಇದು ಒಬ್ಬ ಭೀಮಬಲದ ಅಡಿಗೆಯವನು ಕನ್ನಡದ ಅಭಿಮಾನವನ್ನು ಕಾಯ್ದ ಕತೆ. ಬ್ರಿಟಿಷರ ವಿರುದ್ಧ ರಾಣಿ ಚೆನ್ನಮ್ಮ ಖಡ್ಗ ಹಿಡಿದು ಹೋರಾಡಿ ಥ್ಯಾಕರೆಯ ರುಂಡವನ್ನು ಚೆಂಡಾಡಿದಳು. ಬ್ರಿಟಿಷರ ವಿರುದ್ಧ ಕಪ್ಪ ಕೊಡುವುದಿಲ್ಲವೆಂದು ಕನ್ನಡ ನೆಲದಲ್ಲಿ ಮೊದಲ ಸ್ವಾತಂತ್ರ್ಯದ ಯುದ್ಧವನ್ನು ಸಾರಿದರು. ಇದು ಕನ್ನಡದ ಅಭಿಮಾನ. ಬೆಳವಡಿ ಮಲ್ಲಮ್ಮ, ಕೆಳದಿ ಚೆನ್ನಮ್ಮ ಇವರು ನಾವು ಅಭಿಮಾನ ಪಡುವ ಕನ್ನಡ ವೀರ ರಾಣಿಯರು. ಔರಂಗಜೇಬನ ಮಗನನ್ನು ಯುದ್ಧದಲ್ಲಿ ಕೊಂದು ಶಿವಾಜಿಯ ಮಗ ಷಹಜಿಗೆ ಆಶ್ರಯ ನೀಡಿದ ವೀರರಾಣಿ ಕೆಳದಿ ಚೆನ್ನಮ್ಮ. ಇದು ಕನ್ನಡ ಅಭಿಮಾನ. ಹೀಗೆ ಕನ್ನಡದ ಮಹಿಳೆಯರು ಕನ್ನಡದ ಕೀರ್ತಿಯನ್ನು ಪ್ರಪಂಚದ ಇತಿಹಾಸದಲ್ಲಿ ತಮ್ಮ ಶೌರ್ಯ, ಸಾಹಸ, ಪ್ರತಿಭೆಗಳನ್ನು ಮೆರೆದಿದ್ದಾರೆ. ಇಂಗ್ಲೀಷಿನಲ್ಲಿ ಬಂದ ಭಾವಗೀತೆಗಳನ್ನು ಮೀರಿಸುವ ಭಾವಗೀತ ಪ್ರಕಾರದ ಸಾಹಿತ್ಯವನ್ನು ಅಕ್ಕಮಹಾದೇವಿಯರು ೧೨ನೇ ಶತಮಾನದಲ್ಲಿಯೇ ಪ್ರಕೃತಿಯ ಪ್ರೀತಿಯ ವಚನಗಳನ್ನು ಬರೆದು ಕನ್ನಡದ ಹಿರಿಮೆಯನ್ನು ಜಗತ್ತಿಗೆಲ್ಲ ಸಾರಿದ್ದಾರೆ. ಇದು ಕನ್ನಡಾಭಿಮಾನ ಅಭಿಮಾನ ಎಂದರೆ ಜಗತ್ತಿನ ಮಹಾಪುರುಷರು, ಸಾಧಕರು ಇವರ ಸಾಲಿನಲ್ಲಿ ಇವರಿಗೆ ಹೆಗಲೆಣೆಯಾಗಿ ನಿಂತು ಕನ್ನಡಿಗರೂ ಹೆಮ್ಮೆಪಡುವ ಸಾಧನೆ ಮಾಡಿದರು.

ಕನ್ನಡ ಅಭಿವೃದ್ಧಿ ಪ್ರಾಧಿಕಾರದವರು ಗಡಿನೆಲದಲ್ಲಿ ಕನ್ನಡ ಸಂಸ್ಕೃತಿ ಉಳಿಸುವ ಬೆಳೆಸುವ ಇಂತಹ ಸುಂದರ ಕಾರ್ಯಕ್ರಮವನ್ನು ಆಯೋಜಿಸಿದ್ದಾರೆ. ಇಲ್ಲಿನ ಎಲ್ಲ ಕನ್ನಡಿಗರು ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿಯನ್ನು ಎಲ್ಲರ ಪ್ರೀತಿಗಳಿಸಿ ಮನೆ ಮನ ತಲುಪುವಂತೆ ಕನ್ನಡ ಭಾಷೆಯನ್ನು ಬೆಳೆಸಬೇಕು. ಮರಾಠಿಯನ್ನು ನಾವು ಕಲಿಯೋಣ. ಅವರಿಗೆ ನಮ್ಮ ಕನ್ನಡವನ್ನು ಕಲಿಸೋಣ. ಮರಾಠಿಯ ಸಾಹಿತ್ಯವನ್ನು ನಾವು ಓದೋಣ. ನಮ್ಮ ಕನ್ನಡ ಸಾಹಿತ್ಯವನ್ನು ಅವರಿಗೆ ಕಲಿಸೋಣ. ಇಲ್ಲಿ ಸ್ನೇಹ, ಭ್ರಾತೃತ್ವ ಪ್ರೀತಿಯಿಂದ ಪರಸ್ಪರರು ಗೌರವದಿಂದ ಬಾಳುವ ಜೀವನವನ್ನು ನಡೆಸೋಣ. ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ ಗಡಿನಾಡಿನ ಎಲ್ಲ ಮನೆ, ಮನ ತಲುಪಬೇಕು. ೧೯೪೭ರಲ್ಲಿ ನಮಗೆ ಸ್ವಾತಂತ್ರ್ಯ ಸಿಕ್ಕರೂ ಕರ್ನಾಟಕದ ಏಕೀಕರಣವಾದುದು ೧೯೫೬ರಲ್ಲಿ. ಕರ್ನಾಟಕ ಎಂದು ಹೆಸರಾದುದು ೧೯೭೩ರಲ್ಲಿ. ಆದರೆ ಕನ್ನಡದ ಸ್ಥಾನಮಾನಗಳು, ಕನ್ನಡಭಾಷೆಯ ಗೌರವವನ್ನು ಕನ್ನಡಿಗರಾದ ನಾವು ಇನ್ನೂ ಹೆಚ್ಚಿನ ರೀತಿಯಲ್ಲಿ ಬೆಳೆಸಲು ಸಾಧನೆ ಮಾಡ ಬೇಕಾಗಿದೆ. ಇದು ಕೇವಲ ಘೋಷಣೆಗಳಿಂದ ಆಗುವ ಕೆಲಸವಲ್ಲ. ಪ್ರತಿಭೆ, ಸಾಹಸ, ಪ್ರಯತ್ನದಿಂದ ಆಗಬೇಕಾದ ಕೆಲಸ. ❑

'...ಹಿಂದೆ ಸಂಸ್ಕೃತದಿಂದ ಕನ್ನಡ ಬದುಕಿತು; ಮುಂದಕ್ಕೆ ಕನ್ನಡದಲ್ಲ ಸಂಸ್ಕೃತ ಬದುಕಬೇಕು... ನಮ್ಮ ನೆರೆಹೊರೆಯ ತಮಿಳರಲ್ಲಿಯೂ, ತೆಲುಗರಲ್ಲಿಯೂ ಇರುವ ಮಟ್ಟಿಗೆ ವಾಚನಾಭ್ಯಾಸವು ನಮ್ಮಲ್ಲಿಲ್ಲ... ಕನ್ನಡ ನಾಡಿನಲ್ಲ ಪ್ರತಿಯೊಂದು ಮನೆಗೂ ದೀಪವು ಹೇಗೆಯೋ ಪುಸ್ತಕವೂ ಹಾಗೆಯೇ ಅವಶ್ಯ ವಸ್ತುವೆಂಬುದನ್ನು ನಮ್ಮವರು ಗ್ರಹಿಸಬೇಕಾಗಿದೆ... ನಮ್ಮ ಭಾಷೆಯು ನಮ್ಮ ಪ್ರೀತಿ ಕೃತಜ್ಞತೆಗಳಿಗೆ ಅರ್ಹವಾದದ್ದು. ಅದು ಚೆನ್ನಾಗಿ ಬಾಳದರೆ ನಮ್ಮ ಜನರ ಬಾಳು ಮೇಲಾಗುತ್ತದೆ. ಅದನ್ನು ಸಮೃದ್ಧಿಪಡಿಸುವುದಕ್ಕಿಂತ ನಮಗೆ ದೊಡ್ಡ ಧರ್ಮವಾವುದು?.. ಕನ್ನಡದ ಒಂದೊಂದು ನುಡಿಯೂ ಕಿಡಿಯಾಗಬೇಕು. ಸಿಡಿಲಾಗಬೇಕು; ನಕ್ಷತ್ರವಾಗಬೇಕು, ಅಮೃತಬಿಂದುವಾಗಬೇಕು.

-ಡಿ.ವಿ. ಗುಂಡಪ್ಪನವರು







# ಗುಪ್ತಭಕ್ತಿಯ ಮಹಾಶರಣ ಮಾದಾರ ಚೆನ್ನಯ್ಯ

–ಎಚ್.ಎಸ್. ಸಿದ್ಧಗಂಗಪ್ಪ *

ಬಸವಣ್ಣನವರು ಕಲ್ಯಾಣದಲ್ಲಿ ನಡೆಸಿದ ಸಾಮಾಜಿಕ, ಧಾರ್ಮಿಕ, ವಿಚಾರಕ್ರಾಂತಿ ನೆರೆರಾಜ್ಯಗಳಲ್ಲದೆ ದೂರದ ಕಾಶ್ಮೀರದವರಿಗೂ ಪ್ರಭಾವವನ್ನು ಬೀರಿತ್ತು. ಅನೇಕ ಜನ ಬಸವಾದಿ ಶರಣರು ನಡೆಸುತ್ತಿದ್ದ ಸಾಮಾಜಿಕ ಕ್ರಾಂತಿಯಲ್ಲಿ ಭಾಗಿಗಳಾಗಿ ಪ್ರಭುದೇವರ ನೇತೃತ್ವದ ಅನುಭವಮಂಟಪದಲ್ಲಿ ಮುಕ್ತವಾಗಿ ತಮ್ಮ ಭಾವನೆಗಳನ್ನು ವಚನಗಳ ಮೂಲಕ ಅಭಿವ್ಯಕ್ತಿಪಡಿಸಿದುದು ಒಂದು ಮಹತ್ವದ ಕೊಡುಗೆ. ಬಸವಣ್ಣನವರು ಕಾಯಕ ದಾಸೋಹ ಸಿದ್ಧಾಂತವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಬದುಕುವುದರ ಮೂಲಕ ಸಮಾಜದಲ್ಲಿ ಸಂಚಲನವನ್ನುಂಟು ಮಾಡಿದರು. ಬೇರೆ ಬೇರೆ ಭಾಷಿಕರಾದ ಶರಣರು ಕಲ್ಯಾಣಕ್ಕೆ ಬಂದ ಮೇಲೆ ಅಲ್ಪಕಾಲದಲ್ಲಿಯೇ ಕನ್ನಡವನ್ನು ಕಲಿತು ತಮ್ಮ ವಿಚಾರಗಳಿಗೆ, ಭಾವನೆಗಳಿಗೆ ವಚನಗಳ ಮೂಲಕ ಒಂದು ಮೂರ್ತರೂಪವನ್ನು ಕೊಟ್ಟಿದುದು ಭಾರತೀಯ ಇತಿಹಾಸದಲ್ಲೇ ಅಪೂರ್ವವಾದುದು.

ಅನೇಕ ಜನ ಶರಣರು ತಾವು ಮಾಡುವ ವೃತ್ತಿಯಲ್ಲಿಯೇ ಸಂತೋಷ, ನೆಮ್ಮದಿಯನ್ನು ಕಾಣುತ್ತಾ ಭಕ್ತಾಧೀನನಾದ ಪರಶಿವನನ್ನು, ಭಕ್ತಿಯಿಂದ ಒಲಿಸಿಕೊಂಡು ಶಿವನ ಒಲುಮೆಗೆ ಪಾತ್ರರಾದರು. ತನ್ನ ಗುಪ್ತ ಭಕ್ತಿಯಿಂದ ಶಿವನನ್ನು ಒಲಿಸಿಕೊಂಡು, ಅದು ಶಿವನಿಂದ ಲೋಕಜಾಹಿರವಾದಾಗ ಮನನೊಂದು ಆತ್ಮಹತ್ಯೆಗೆ ಮುಂದಾದುದು ಇತಿಹಾಸದಲ್ಲೇ ಒಂದು ಅದ್ಭುತ ಘಟನೆ. ಗುಪ್ತಭಕ್ತಿಯಿಂದ ಶಿವನ ಒಲುಮೆಯನ್ನು ಗಳಿಸಿದ ಮಹಾಶರಣನೆ ಮಾದಾರ ಚೆನ್ನಯ್ಯ.

ಮಾದಾರ ಚೆನ್ನಯ್ಯ ತಮಿಳುನಾಡಿನ ಕಾಂಚಿ ನಗರದಲ್ಲಿ ವಾಸಮಾಡುತ್ತಿದ್ದ ಅಸ್ಪೃಶ್ಯಜಾತಿಗೆ ಸೇರಿದವ. ಕಾಂಚಿ ನಗರದ ರಾಜ ಶಿವಭಕ್ತ ಶಿರೋಮಣಿ ಕಲಿಕಾಲಚೋಳ ಭೂಪತಿಯ ಅರಮನೆಯ ಅಶ್ವಾಲಯಕ್ಕೆ ಹುಲ್ಲು ಹೊರುವ ಕಾಯಕವನ್ನು ಶ್ರದ್ಧೆ, ನಿಷ್ಠೆಯಿಂದ ಸುಮಾರು ಅರವತ್ತು ವರ್ಷಕ್ಕೂ ಹೆಚ್ಚು ಕಾಲ ಮಾಡಿದನೆಂದು ತಿಳಿದು ಬರುತ್ತದೆ. ಅವನು ಬಸವಣ್ಣನವರ ಪ್ರಭಾವಕ್ಕೊಳಗಾಗಿ ಕಲ್ಯಾಣಕ್ಕೆ ಬಂದಿದ್ದನೆ ಎಂಬುದಕ್ಕೆ ಐತಿಹಾಸಿಕವಾಗಿ ಆಧಾರಗಳಿಲ್ಲದಿದ್ದರೂ, ಜನಪದ ಸಾಹಿತ್ಯದಲ್ಲಿ ಅವನ ವ್ಯಕ್ತಿತ್ವದ ವರ್ಣನೆ ಕಲ್ಯಾಣಕ್ಕೆ ಬಂದಿದ್ದನೆಂಬುದಕ್ಕೆ ಪುಷ್ಟಿಯನ್ನು ನೀಡುತ್ತದೆ. ಆತನು ತಮಿಳು ಭಾಷಿಕನಾದರೂ ಕನ್ನಡವನ್ನು ಕಲಿತು ವೈಚಾರಿಕ ವಚನಗಳನ್ನು ರಚಿಸಿದುದು ಆಶ್ಚರ್ಯವನ್ನುಂಟುಮಾಡುತ್ತದೆ. ಅಲ್ಲದೆ ಬಸವಣ್ಣನವರು ತಮ್ಮ ವಚನದಲ್ಲಿ ಮಾದಾರ ಚೆನ್ನಯ್ಯನ ವ್ಯಕ್ತಿತ್ವವನ್ನು ಮನದುಂಬಿ ವರ್ಣನೆ ಮಾಡಿರುವುದು ಅವನು ಕಲ್ಯಾಣಕ್ಕೆ ಬಂದಿದ್ದನೆಂಬುದಕ್ಕೆ ಪುಷ್ಟಿ ದೊರೆಯುತ್ತದೆ. ಮಾದಾರ ಚೆನ್ನಯ್ಯನ ಮುಗ್ಧ ಭಕ್ತಿಗೆ ಮನಸೋತ ಬಸವಣ್ಣನವರು ವಚನಗಳ ಮೂಲಕ ಹಾಡಿ ಹೊಗಳಿದ್ದಾರೆ

***'ಸೂಳೆಗೆ ಹುಟ್ಟಿದ ಕೂಸಿನಂತೆ ಆರನಾದೊಡೆಯೂ***
***ಅಯ್ಯಾ ಎನಲಾರೆನಯ್ಯಾ, ಚೆನ್ನಯ್ಯನೆಮ್ಮಯ್ಯನು***
***ಚೆನ್ನಯ್ಯನ ಮಗನಾನು. ಚೆನ್ನಯ್ಯನ ಮನೆಯ ದಾಸನ***
***ಮಗ ನಾನು. ಚೆನ್ನಯ್ಯನೆನ್ನ ಮುತ್ತಯ್ಯನಜ್ಜನಪ್ಪನಯ್ಯ,***
***ಅಯ್ಯಗಳ ಅಯ್ಯ ನಮ್ಮ ಮಾದಾರ ಚೆನ್ನಯ್ಯ,***
***ಕುಲತಿಲಕ ನಮ್ಮ ಮಾದಾರ ಚೆನ್ನಯ್ಯ.***
***ಉನ್ನತಮಹಿಮ, ಉಮೇಶನಿಂದಧಿಕ ಚಿಕ್ಕಯ್ಯ***
***ಚೆನ್ನಯ್ಯಗಳೆತ್ತಿ ಮುದ್ದಾಡಿರೆನ್ನ, ಮಹಾದಾನಿ***
***ಕೂಡಲಸಂಗಮದೇವಾ ಮಾದಾರ ಚೆನ್ನಯ್ಯನ ಮಗ***
***ನಾನಯ್ಯ' !***

ಭಕ್ತಿ ಭಂಡಾರಿ ಬಸವಣ್ಣನವರು ಇಷ್ಟೊಂದು ಪರಿಯಾಗಿ ಮೈಯುಬ್ಬಿ, ಮನದುಂಬಿ ಕೊಂಡಾಡಿರುವುದನ್ನು ಕಂಡಾಗ ಮಾದಾರ ಚೆನ್ನಯ್ಯ ಮಹೋನ್ನತ ವ್ಯಕ್ತಿತ್ವ ಎಂಥಹುದು ಎಂಬುದು ಗೊತ್ತಾಗುತ್ತದೆ. ಬಸವಣ್ಣನವರಿಗೆ

* 53/1, 'ಶಿವಕೃಪ', ಮೊದಲನೇ ಮುಖ್ಯರಸ್ತೆ, ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು.

ಮಾದಾರ ಚೆನ್ನಯ್ಯನನ್ನು ಎಷ್ಟು ಹೊಗಳಿದರೂ ತೃಪ್ತಿಯಿಲ್ಲ.

*'ನಡೆ ಚೆನ್ನ ನುಡಿ ಚೆನ್ನ, ಎಲ್ಲಿ ನೋಡಿದೊಡೆ ಚೆನ್ನ ಪ್ರಮಥರೊಳಗೆ ಚೆನ್ನ, ಪುರಾತನರೊಳಗೆ ಚೆನ್ನ, ಸವಿದು ನೋಡಿ ಅಂಬಲಿ ರುಚಿಯಾಯಿತ್ತೆಂದು ಕೂಡಲಸಂಗಮ ದೇವಂಗೆ ಬೇಕೆಂದು ಕೈದೆಗದ ನಮ್ಮ ಚೆನ್ನ'*

ಒಬ್ಬ ಸಮರ್ಥ ನಾಯಕನಿಗಿರಬೇಕಾದ ಎಲ್ಲಾ ಉದಾತ್ತ ಗುಣಗಳು ಬಸವಣ್ಣನವರಿಗಿದ್ದುದರಿಂದಲೇ ಎಲ್ಲರ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾಗಿದ್ದರು. ಸಮಾಜದ ವಿವಿಧ ಸ್ಥರಗಳ ಜನರು ಅವರ ವ್ಯಕ್ತಿತ್ವಕ್ಕೆ ಮಾರುಹೋಗಿ ತಮ್ಮ ನಾಯಕ ನೆಂದು ಒಪ್ಪಿಕೊಂಡರು. ಅಪ್ಪಿಕೊಂಡರು. ಇವರೆಲ್ಲರ ಸಹಕಾರದಿಂದ ಬಸವಣ್ಣನವರು ಸಮಾಜದಲ್ಲಿ ಬೇರೂರಿದ್ದ ಅಸ್ಪೃಶ್ಯತೆ, ಮೂಢನಂಬಿಕೆ, ಕಂದಾಚಾರಗಳ ವಿರುದ್ಧ ಹೋರಾಡಲು ಸಾಧ್ಯವಾಯಿತು.

ಮಾದಾರ ಚೆನ್ನಯ್ಯ ತಾನು ಮಾಡುತ್ತಿದ್ದ ಕಾಯಕದಲ್ಲಿ ಶಿವನನ್ನು ಭಕ್ತಿಯಿಂದ ಆರಾಧಿಸುತ್ತಿದ್ದ. ಹರಿಹರ ಅವನ ಮೇರು ಸದೃಶವಾದ ಶಿವಭಕ್ತಿಯ ಪರಿಯನ್ನು ಮನಮುಟ್ಟುವಂತೆ ವರ್ಣಿಸಿದ್ದಾನೆ. ಅವನು ಕಂಡುದುದ ಶಿವಲಿಂಗಕ್ಕೆ, ಕೊಂಡುದುದ ಗುರುಲಿಂಗಕ್ಕೆ, ಕೇಳಿದುದ ಪ್ರಸಾದಲಿಂಗಕ್ಕೆ, ವಾಸಿದುದ ಆಚಾರಲಿಂಗಕ್ಕೆ ಸ್ಪರ್ಶಿಸುದುದ, ಜಂಗಮ ಲಿಂಗಕ್ಕೆ ನೆನೆದುದ, ಮಹಾಲಿಂಗಕ್ಕೆ ಅರ್ಪಿಸುವುದನ್ನು ಅಳವಡಿಸಿಕೊಂಡಿದ್ದ ಅನುಭಾವಿ ತನ್ನ ಷಡಿಂದ್ರಿಯಗಳಲ್ಲಿ ಷಡ್ಲಿಂಗಗಳನ್ನು ಧರಿಸಿ ಸರ್ವವನ್ನು ಶಿವಾರ್ಪಿತ ಮಾಡುತ್ತಲಿದ್ದ ಶಿವಶರಣ. ಒಟ್ಟಿನಲ್ಲಿ ಅದೊಂದು ಅನುಭಾವಕ್ಕೆ ಅರ್ಪಿತವಾದ ಜೀವನ.

ಮಾದಾರ ಚೆನ್ನಯ್ಯನ ಕಾಯಕಶ್ರದ್ಧೆ ಅನುಪಮವಾದುದು. ಅವನು ಕಾಡಿನಲ್ಲಿ ಹುಲ್ಲು ಕೊಯ್ದು ಹೊರೆಕಟ್ಟುವವರಗೆ ಅಂತರಂಗದಲ್ಲಿ ಶಿವಪೂಜೆ ನಡೆಸುತ್ತಿದ್ದ. ಹೊರೆ ಕಟ್ಟುವ ಕೆಲಸ ಮುಗಿಯುತ್ತಿದ್ದಂತೆ ಬಹಿರಂಗದಲ್ಲಿ ಪೂಜೆ ನಡೆಸಲು ಸಿದ್ಧನಾಗುತ್ತಿದ್ದ. ಕಾವೇರಿಯ ತೀರದಲ್ಲೊಂದು ತಂಪಾದ ತಾಣ. (ಮೆಟ್ಟೂರು ಅಣೆಕಟ್ಟು ಕಟ್ಟುವವರಿಗೂ ಕಾವೇರಿನದಿ ಕಾಂಚಿಯವರೆಗೂ ಹರಿಯುತ್ತಿದ್ದಿರಬೇಕು) ಅಲ್ಲೊಂದು ಮಲ್ಲಿಗೆಯ ಮಂಟಪದಲ್ಲಿ ನುಣುಪಾದ ಮರಳಿನ ಕಟ್ಟೆಯನ್ನು ಕಟ್ಟಿ ತಳಿರನ್ನು ಹಾಸಿ ಪೂಜೆಗೆ ಅಣಿ ಮಾಡಿಕೊಂಡು ಕೂರುತ್ತಿದ್ದ ರೀತಿಯನ್ನು ಕವಿ ಹರಿಹರ ಬಹು ಸುಂದರವಾಗಿ ವರ್ಣಿಸಿದ್ದಾನೆ

*'ಬಾರಯ್ಯ ಬಾರ ಶಿವ ಭಕ್ತೈಕ ಬಂಧುವೆ*
*ಬಾರಯ್ಯ ಬಾರ ಕಾರುಣ್ಯರಸ ಸಿಂಧುವೆ*
*ಗುರುವೆ ವರಗುರುವೆ ಸದ್ಗುರುವೆ ಗುರುಲಿಂಗವೆ*
*ಭರದಲರ್ಚಿಪ ಜನದ ಮನದ ಸರ್ವಾಂಗವೆ'*

ಎಂದು ಮಣ್ಣಿನಿಂದ ಶಿವನ ಕುರುಹಾದ ಲಿಂಗವನ್ನು ತೆಗೆದು ಅಂಗೈಯಲ್ಲಿಟ್ಟು ಅಗ್ಗವಣೆಯ ನೆರೆದು ಮೊಲ್ಲೆ ಮಲ್ಲಿಗೆಗಳನ್ನು ಧರಿಸಿ ತದೇಕಚಿತ್ತದಿಂದ ಶಿವನನ್ನು ಪೂಜಿಸುವ ಪರಿಯನ್ನು ಕವಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ.

*'ಅಡಿಗಡಿಗೆ ನೋಡಿ ಮಾತಾಡಿ ಮೈವೆರ್ಚ್ಚುತಂ*
*ಹಾಡಿತಣಿವುತೆ ಮತ್ತೆ ಮತ್ತೆ ಮಿಗೆ ಕೊರ್ಬುತುಂ*
*ಪುಳಕಿಸುತೆ ಪುಟವೇರಿ ತವಕಿಸುತೆ ಮದವೇರಿ*
*ಎಳಸುತಂ ದಳವೇರಿ ಬಳಸುತುಂ ಬಲ್ಪೇರಿ*
*ನುಡಿಯಿತು ಗದಗದಿಸಿ ಬೆಮರುತುಂ ಸಡಗರಿಸಿ*
*ನಡೆವುತಂ ದೆಂಡಣಿಸಿ ಬೀಳುತಂ ತರಹರಿಸಿ*
*ಮೆಲ್ಲನೆಚ್ಚತ್ತು ಶಿವಲಿಂಗಮಂ ನಡೆನೋಡಿ*
*ಲಲ್ಲೆಗರೆವುತ್ತ ಪರಮಸ್ನೇಹಮಂ ಮಾಡಿ'*

ಕಣ್ಣುಗಳಲ್ಲಿ ಲಿಂಗಮೂರ್ತಿಯನ್ನು ತುಂಬಿಕೊಂಡು, ಮಾತಿನಲ್ಲಿ ಲಿಂಗಕೀರ್ತಿಯನ್ನು ತುಂಬಿಕೊಂಡು, ಚಿತ್ತದಲ್ಲಿ ಲಿಂಗ ಪ್ರೀತಿಯನ್ನು ತುಂಬಿಕೊಂಡು ಎಲ್ಲರೊಡನೆ ಹುಲ್ಲು ಹೊರೆ ಹೊತ್ತು ಚೋಳರಾಯನ ಕುದುರೆಗಳ ಪಾಳೆಯಕ್ಕೆ ಹುಲ್ಲು ಹೊರೆಯನ್ನು ಹಾಕುವುದರ ಮೂಲಕ ಅಂದಿನ ಕಾಯಕವನ್ನು ಮುಗಿಸಿ ಮನೆಗೆ ಬರುತ್ತಿದ್ದನು.

ಮನೆಯಲ್ಲಿ ಚೆನ್ನಯ್ಯನ ಪುಣ್ಯಾಂಗನೆ ಅಂಬಲಿಯನ್ನು ಮಾಡಿ ಗಂಡನ ಬರುವಿಕೆಯನ್ನು ನಿರೀಕ್ಷಿಸುತ್ತಾ ಕುಳಿತಿರುತ್ತಿದ್ದಳು. ಮಾದಾರ ಚೆನ್ನಯ್ಯ ಹೆಂಡತಿ ಪ್ರೀತಿಯಿಂದ ಮಾಡಿದ ಅಂಬಲಿಯಲ್ಲಿ ಭಕ್ತಿಯ ಅಮೃತವನ್ನು ಬೆರೆಸಿ ಶಿವನಿಗರ್ಪಿಸಿ ತಾನೂ ಸೇವಿಸುತ್ತಿದ್ದನು. ಅವನು ಅರ್ಪಿಸುತ್ತಿದ್ದ ಅಂಬಲಿಯ ರುಚಿಗೆ ಶಿವನ ಬಾಯಲ್ಲಿ ನೀರೂರುತ್ತಿತ್ತು ಪ್ರೀತಿಯಿದ್ದ ಕಡೆ ಅಂಬಲಿಯೇ ಅಮೃತ ; ಕಂಬಳಿಯೇ ಸುಪ್ಪತ್ತಿಗೆ.

ಚೆನ್ನಯ್ಯನ ಗುಪ್ತಭಕ್ತಿ ಹೀಗೆಯೇ ನಿರಂತರವಾಗಿ ಸಾಗುತ್ತಾ ಅರವತ್ತು ವರ್ಷಗಳು ಕಳೆದವು. ಆದರೆ ಅವನ





ನಿಜಭಕ್ತಿ ಶಿವನಿಗೊಬ್ಬನಿಗಲ್ಲದೆ ಬೇರೆಯವರಿಗೆ ಗೊತ್ತಿರಲಿಲ್ಲ. ಲೋಕದ ದೃಷ್ಟಿಯಲ್ಲಿ ಆತ ಅರಮನೆಯ ಸೇವಕ. ತನ್ನ ಅಂತರಂಗದ ಭಕ್ತಿ ಲೋಕಕ್ಕೆ ಗೊತ್ತಾಗಬೇಕೆಂದು ಎಂದೂ ಬಯಸಿದವನಲ್ಲ. ಅವನಿಗದು ಬೇಡವಾಗಿತ್ತು. ಆದರೆ ಚೆನ್ನಯ್ಯನ ಈ ನಿಲುವು ಶಿವನಿಗೆ ಸೈರಿಸಲಾಗಲಿಲ್ಲ. ತನ್ನ ಭಕ್ತರಲ್ಲಿಯೇ ಶ್ರೇಷ್ಠನಾದ, ಗರಿಷ್ಠನಾದ ಚೆನ್ನಯ್ಯ ಅಜ್ಞಾತವಾಗಿಯೇ ಉಳಿಯಬೇಕೇ; ಬೇರೆಯವರಿಗೆ ಇವನ ಹಿರಿಮೆ ಗರಿಮೆಗಳು ಗೊತ್ತಾಗಬಾರದೆ ಎಂದು ಯೋಚಿಸಿ ಅವನ ಭಕ್ತಿಯನ್ನು ಲೋಕಕ್ಕೆ ತಿಳಿಸಬೇಕೆಂದು ಶಿವ ನಿರ್ಧರಿಸಿದ.

ಒಮ್ಮೆ ಚೆನ್ನಯ್ಯ ಒಂದು ರಾತ್ರಿ ಅಂಬಲಿಯನ್ನು ಶಿವನಿಗೆ ಅರ್ಪಿಸಿದಾಗ ಶಿವ ಸಂತೋಷದಿಂದ ಕುಡಿದು ಸಂತೃಪ್ತನಾದನು. ಕರಿಕಾಲ ಚೋಳರಾಜನು ಪ್ರತಿನಿತ್ಯವೂ ತಪ್ಪದಂತೆ ಶಿವನಿಗೆ ಪೂಜೆ ಮಾಡಿ, ಮೃಷ್ಟಾನ್ನದ ನೈವೇದ್ಯವನ್ನು ನೀಡುತ್ತಿದ್ದನು. ತನಗೆ ವಯಸ್ಸಾಯಿತು ತನ್ನ ನಂತರ ಶಿವನಿಗೆ ಸಕಲ ನೈವೇದ್ಯವನ್ನು ಸಲ್ಲಿಸುವರಾರೆಂಬ ಚಿಂತೆಯಲ್ಲಿಯೇ ರಾತ್ರಿಯನ್ನು ಕಳೆಯುತ್ತಾನೆ.

ಬೆಳಗಾಯಿತು. ಎಂದಿನಂತೆ ರಾಜ ಮುಂಜಾನೆಯ ಪೂಜೆಗಾಗಿ ದೇವಾಲಯಕ್ಕೆ ಹೋಗಿ ಭಕ್ತಿಯಿಂದ ಪೂಜೆ ಸಲ್ಲಿಸಿ ಸಕಲ ನೈವೇದ್ಯಗಳಾದ ದಿವ್ಯಾನ್ನ, ದೇವಾನ್ನ, ಅಮೃತಾನ್ನ ಮೊದಲಾದವುಗಳನ್ನು ಶಿವಲಿಂಗದ ಮುಂದೆ ಇರಿಸಿ 'ಆರೋಗಿಸು ತಂದೆ' ಎಂದು ತೆರೆಯ ಹಿಂದೆ ನಿಂತನು. ಸ್ವಲ್ಪಹೊತ್ತು ಕಳೆದು ನೋಡಿದಾಗ ಎಂದಿನಂತೆ ಶಿವನು ನೈವೇದ್ಯವನ್ನು ಸೇವಿಸದೆ ಸುಮ್ಮನಿರುವುದನ್ನು ಕಂಡು ರಾಜನಿಗೆ ತುಂಬಾ ಬೇಸರ, ದುಃಖ ಉಂಟಾಯಿತು. ಮನನೊಂದು ಖಡ್ಗದಿಂದ ತನ್ನ ಶಿರವನ್ನು ಕತ್ತರಿಸಿಕೊಳ್ಳಲು ಮುಂದಾದಾಗ 'ಸೈರಿಸು, ಸೈರಿಸು ಚೋಳ ಭೂಪಾಲ' ಎಂದು ಶಿವ ಅವನನ್ನು ತಡೆದು, 'ಬೇಸರಪಟ್ಟುಕೊಳ್ಳಬೇಡ' ಚೆನ್ನಯ್ಯನ ಅಂಬಲಿಯು ಬಹಳ ರುಚಿಯಾಗಿದ್ದುದರಿಂದ ಬಹಳ ಕುಡಿದುಬಿಟ್ಟೆ. ಹೊಟ್ಟೆ ತುಂಬಿದೆ. ಹಸಿವಾಗಿಲ್ಲ ಎಂದು ಹೇಳುತ್ತಾನೆ. ಶಿವನ ಮಾತನ್ನು ಕೇಳಿ ಚೋಳರಾಯನು ಬೆರಗಾಗುವುನಲ್ಲದೆ ಚೆನ್ನಯ್ಯನನ್ನು ಹುಡುಕುತ್ತಾ ಕಾಂಚಿ ಪಟ್ಟಣದ ಸಂದಿಗೊಂದಿಗಳನ್ನು ತಿರುಗುತ್ತಾನೆ. ಅವನ ಆಗಿನ ಮನಸ್ಥಿತಿಯನ್ನು ಹರಿಹರ ಮನಮುಟ್ಟುವಂತೆ ವರ್ಣಿಸಿದ್ದಾನೆ.

*'ತೋರಿರೇ ಚಂದ್ರಮೌಳಿಯ ಭಕ್ತ ಚೆನ್ನನಂ ತೋರಿರೇ*
*ಷಡ್ವರ್ಗ ಕರ್ಣನಂ ಚೆನ್ನನಂ ತೋರಿರೇ*
*ಚೆನ್ನನಂ ತೋರಿ ಎನ್ನಂ ಕಾಯ್ದುಕೊಳ್ಳಿರೇ*
*ಚೆನ್ನಯ್ಯನೆನ್ನಯ್ಯ ನಿರ್ದೆಡೆಯನರುಪಿರೇ*
*ಚೆನ್ನಯ್ಯನಿರ್ಪ ಗುಡಿಯಿದೇ ಎಂದು ತೋರಿರೇ*
*ಚೆನ್ನಯ್ಯ ಭಕ್ತನ್ನೆನ್ನಯ್ಯನಂ ತೋರಿರೇ'*

ಎಂದು ಕಂಡಕಂಡವರನ್ನೆಲ್ಲ ಚೆನ್ನಯ್ಯನ ಇರುವನ್ನು ಕೇಳುತ್ತಾ ಚೆನ್ನಯ್ಯನ ಕುಟೀರಕ್ಕೆ ಬರುತ್ತಾನೆ. ಚೆನ್ನಯ್ಯನನ್ನು ನೋಡುತ್ತಲೇ ಹರ್ಷಚಿತ್ತನಾಗಿ ಭಕ್ತಿಯಿಂದ ಪಾದಗಳಿಗೆ ನಮಸ್ಕರಿಸುತ್ತಾನೆ. ಮಾದಾರ ಚೆನ್ನಯ್ಯ ಗಾಬರಿಯಿಂದ ನಾನು ಕೀಳು ಜಾತಿಯವನು ಚಕ್ರವರ್ತಿಗಳಾದ ತಾವು ನಮಸ್ಕರಿಸುವುದೇ ! ಸರಿಯಲ್ಲ ಎಂದು ಹೇಳುತ್ತಾನೆ. ಆಗ ಚೋಳರಾಜ

*'ಎಲೆ ದೇವ ! ದೇವನೊಲ್ದನ ಕುಲಂ ಸತ್ಕುಲಂ*
*ಘನಮಹಿಮನೊಲ್ದ ಜಾತಿಯೇ ಜಾತಿ ನಿರ್ಮಲಂ*
*ಶರ್ವನೊಡನುಂಡ ನಿಮ್ಮಯ ಜಾತಿಗಾಂ ಸರಿಯೆ*
*ಸರ್ವಜ್ಞ ನಿಮ್ಮ ಕೆರವಿಂಗೆನ್ನ ಶಿರ ಸರಿಯೆ'*

ಎಂದು ಹೇಳುತ್ತಾನೆ.

ತನ್ನ ಜೀವನದುದ್ದಕ್ಕೂ ಗುಪ್ತಭಕ್ತಿಯನ್ನು ಕಾಪಾಡಿಕೊಂಡು ಬಂದುದನ್ನು ಶಿವನು ಚೋಳರಾಜನ ಮೂಲಕ ಲೋಕಕ್ಕೆ ತಿಳಿಯುವಂತೆ ಮಾಡಿದುದಕ್ಕಾಗಿ ಚೆನ್ನಯ್ಯ ಶಿವನ ಮೇಲೆ ಸಿಟ್ಟಾಗಿ ತನ್ನ ಶಿರವನ್ನು ಕೊಯ್ದುಕೊಳ್ಳಲು ಮುಂದಾದನಂತೆ. ಶಿವನು ಆತನನ್ನು ತಡೆದು ಸಮಾಧಾನಪಡಿಸಿ ಶಿವಪದವನ್ನು ನೀಡಿದನಂತೆ. ಚೋಳರಾಜ ಸುಮಾರು ೬೦ ವರ್ಷಗಳ ಕಾಲ ತನ್ನ ಅರಮನೆಯಲ್ಲಿ ಸೇವಕನಾಗಿದ್ದು ಚೆನ್ನಯ್ಯನ ಗುಪ್ತಭಕ್ತಿಯನ್ನು ಕಾಣಲಾಗಲಿಲ್ಲದಕ್ಕೆ ಪಶ್ಚಾತ್ತಾಪಪಟ್ಟು, ಅವನನ್ನು ಆನೆಯ ಮೇಲೆ ಅಂಬಾರಿಯಲ್ಲಿ ಕುಳ್ಳರಿಸಿ ನಗರದಲ್ಲೆಲ್ಲ ಮೆರವಣಿಗೆ ಮಾಡಿಸಿದನಂತೆ.

ಮಾದಾರ ಚೆನ್ನಯ್ಯನ ಮಾತೃಭಾಷೆ ತಮಿಳಾದರೂ ಕನ್ನಡವನ್ನು ಚೆನ್ನಾಗಿ ಕಲಿತು ವಚನಗಳನ್ನು ರಚಿಸಿರುವುದು ಕಂಡು ಬರುತ್ತದೆ. ಪ್ರಸ್ತುತ ಅವನ ಹತ್ತು ವಚನಗಳು

ಮಾತ್ರ ದೊರೆತಿವೆ. ಅವನ ವಚನಗಳಲ್ಲಿ ಹೆಚ್ಚಾಗಿ ಜಾತಿ, ಕುಲಗಳ ಪ್ರಸ್ತಾಪ ಬರುತ್ತದೆ. ತಾನು ಸಮಾಜದಲ್ಲಿ ಅನುಭವಿಸಿದುದನ್ನು ಮಾತಿನ ಮೂಲಕ ಪ್ರತಿಭಟಿಸಲಾಗದೆ ತನ್ನ ಭಾವನೆಗಳನ್ನು ವಚನಗಳ ಮೂಲಕ ಸಮರ್ಥವಾಗಿ ಅಭಿವ್ಯಕ್ತಿಗೊಳಿಸಿದ್ದಾನೆ.

*ನಡೆ-ನುಡಿ ಸಿದ್ಧಾಂತವಾದಲ್ಲಿ ಕುಲ ಹೊಲೆ ಎಂಬ*
*ಸೂತಕವಿಲ್ಲ. ನುಡಿಲೇಸು. ನಡೆಯಧಮವಾದಲ್ಲಿ ಅದೇ*
*ಬಿಡುಗಡೆಯಿಲ್ಲದ ಹೊಲೆ.*
*ಹುಸಿ, ಕಳವು, ಪರದಾರಂಗಳಲ್ಲಿ ಹೊಲಬನರಿಯ*
*ಕೆಟ್ಟು ನಡೆವುತ್ತ ಮತ್ತೆ ಕುಲಜರೆಂಬುವರುಂಟೆ*
*ಆಚಾರವೇ ಕುಲ, ಅನಾಚಾರವೇ ಹೊಲೆ-ಇಂತೀ*
*ಉಭಯವ ತಿಳಿಯಬೇಕು*
*ಕೈಯುಳಿಗತ್ತಿ ಅಡಿಗೊಂಟಕ್ಕಡಿಯಾಳಾಗಬೇಡ*
*ಅರಿನಿಜಾತ್ಮರಾಮರಾಮನ.*

ತನ್ನ ಮಾನಸಿಕ ದುಗುಡವನ್ನು, ಅಸಮಧಾನವನ್ನು ತೋಡಿಕೊಂಡಿದ್ದಾನೆ. ಅವನ ಹತ್ತು ವಚನಗಳೂ ಸಾರವತ್ತಾದವುಗಳು. ಕೀಳು ಕುಲದಲ್ಲಿ ಹುಟ್ಟಿದ ಚೆನ್ನಯ್ಯ ಹೆಜ್ಜೆಹೆಜ್ಜೆಗೂ ಮೇಲು ಜಾತಿಯವರ ಶೋಷಣೆಗೆ ಒಳಗಾಗಿ ನೋವನ್ನು ಅನುಭವಿಸಿರಬೇಕು. ಆತ ತನ್ನ ವಚನಗಳ ಮೂಲಕ ಸಮಾಜಕ್ಕೆ ಅರ್ಥಪೂರ್ಣವಾದ ಸವಾಲುಗಳನ್ನು ಹಾಕಿ ಚಿಂತನೆ ಮಾಡುವಂತೆ ಮಾಡಿದ್ದಾನೆ.

*ನರಕುಲ ಹಲವಾದಲ್ಲಿ ಯೋನಿಯುತ್ಪತ್ತಿ ಒಂದೇ ಭೇದ*
*ಮಾತಿನ ರಚನೆ ಎಷ್ಟಾದಡೇನು ನಿಹಿತವರಿವುದು ಒಂದೇ*
*ಭೇದ. ದಿವಾ-ರಾತ್ರಿಯೆಂಬ ಉಭಯನರಿಯುವುದಕ್ಕೆ*
*ತಮ ಬೆಳಗೆಂಬೆರಡಲ್ಲದಿಲ್ಲ*
*ಕುಲವೆರಡು ಶಕ್ತಿ-ಪುರುಷತ್ವ ಅಲ್ಲದಿಲ್ಲ.*
*ಬೇರೆ ಹಲವು ತೆರನುಂಟೆಂದಡೆ ಮೀರಿಕಾಲ ಶ್ರುತದೃಷ್ಟ*
*ಇನ್ನಾವುದು? ಎಲ್ಲಕ್ಕೂ ನೀರು, ನೆಲ, ಸೋಮ, ಸೂರ್ಯ*
*ಆರೈದು ನೋಡುವ ದೃಷ್ಟಿಯೊಂದೇ. ಬೊಂಬೆ ಹಲವು*
*ನೋಡಿದಡೆ ಬೊಂಬೆ ಹಲವಂ ಕಾಣ್ಬಂತೆ ಅದರಂಗವ*
*ತಿಳಿದಲ್ಲಿ ಹಲವು ಕುಲದ ಹೊಲೆ ಎಂದೂ ಇಲ್ಲ*
*ಕೈಯುಳಿಗತ್ತಿ ಅಡಿಗೊಂಟಕ್ಕಡಿಯಾಳಾಗಬೇಡ*
*ಅರಿನಿಜಾತ್ಮರಾಮರಾಮನ'*

ಹಗಲು-ರಾತ್ರಿ, ಹೆಣ್ಣು-ಗಂಡು ಎರಡೇ ಭೇದವಲ್ಲದೆ ನೂರೆಂಟು ಭೇದವಿಲ್ಲ ಎಂಬುದು ಮಾದಾರಚೆನ್ನಯ್ಯನ ಸ್ಪಷ್ಟ ಅಭಿಪ್ರಾಯ. ಇದು ವಾಸ್ತವವೂ ಹೌದು. ಬಸವಣ್ಣನವರ ಚಿಂತನೆ, ವಿಚಾರಧಾರೆಯನ್ನು ಕಾಂಚಿ ನಗರದಲ್ಲಿದ್ದ ಮಾದಾರಚೆನ್ನಯ್ಯನಲ್ಲಿಯೂ ಕಾಣುತ್ತೇವೆ.

*'ವೇದಶಾಸ್ತ್ರಕ್ಕೆ ಹಾರುವನಾಗಿ, ವೀರಯುತ ರಣಕ್ಕೆ ಕ್ಷತ್ರಿಯನಾಗಿ, ಸರ್ವವನಾರೈದು ನೋಡುವಲ್ಲಿ ವೈಶ್ಯನಾಗಿ ವ್ಯಾಪಾರದೊಳಗಾಗಿ, ಕೃಷಿಯ ಮಾಡುವುದಕ್ಕೆ ಶೂದ್ರನಾಗಿ, ಇಂತೀ ಜಾತಿಗೋತ್ರಗಳಲ್ಲಿ ನೀಚ ಶ್ರೇಷ್ಠನೆಂಬ ಎರಡು ಕುಲವಲ್ಲದೆ ಹೊಲೆ ಹದಿನೆಂಟು ಜಾತಿಯೆಂಬ ಕುಲವಿಲ್ಲ. ಬ್ರಹ್ಮವನರಿದಲ್ಲಿ ಬ್ರಾಹ್ಮಣ, ಸರ್ವಜೀವ ಹತಕರ್ಮಕ್ಕೊಳಗಾದಲ್ಲಿ ಸಮಗಾರ ಈ ಉಭಯವನ್ನರಿಯಬೇಕು. ಕೈಯುಳಿಗತ್ತಿ ಅಡಿಗೂಂಟಕ್ಕಡಿಯಾಳಾಗಬೇಡ ಅರಿನಿಜತ್ಮಾರಾಮರಾಮನ'*

ಅರಮನೆಯಲ್ಲಿ ಕುದುರೆಗಳಿಗೆ ಹುಲ್ಲು ತರುವ ಕಾಯಕದಲ್ಲಿ ತೊಡಗಿಸಿಕೊಂಡಿದ್ದ ಮಾದಾರ ಚೆನ್ನಯ್ಯ ಮಹಾಶಿವಭಕ್ತ. ಕೀಳುಜಾತಿಯಲ್ಲಿ ಹುಟ್ಟಿದರೂ ಆಧ್ಯಾತ್ಮದ ಮೇರುಶಿಖರದಂತಿದ್ದ ಚೆನ್ನಯ್ಯ ಶ್ರೇಷ್ಠ ವಚನಗಳನ್ನು ರಚಿಸಿದ ವಚನಕಾರ. ಭಕ್ತಿಭಂಡಾರಿ ಬಸವಣ್ಣನವರಿಂದ ಹೊಗಳಿಸಿಕೊಂಡ ಮಹಾಶರಣ. ❑

ಶುಕ್ಲ, ಶೋಣಿತ, ಮುಜ್ಜೆ, ಮಾಂಸ, ಹಸಿವು, ತೃಷೆ
ವಿಷಯವ್ಯಸನಾದಿಗಳೆಲ್ಲ ಒಂದೇ ಭೇದ
ಮಾಡುವ ಕೃಷಿ ವ್ಯವಸಾಯ ಹಲವಲ್ಲದೆ
ತೋರುವ ತೋರಿಕೆ ಅರಿವ ಆತ್ಮನೊಂದೇ
ಭೇದ. ಆವಕುಲವಾದಡೂ ಅರಿದಲ್ಲಿಯೇ
ಪರತತ್ವ ಭಾವಿ ಮರೆದಲ್ಲಿಯೇ ಮಲ ಮಾಯಾ
ಸಂಬಂಧಿ ಇಂತೀ ಉಭಯವನರಿದು ಮರೆಯ
ಲಿಲ್ಲ ಕೈಯುಳಿಗತ್ತಿ ಅಡಿಗೂಂಟಕ್ಕೆಡೆಯಾಗ
ಬೇಡ ಅರಿನಿಜಾತ್ಮ ರಾಮರಾಮನ !

–ಮಾದಾರ ಚೆನ್ನಯ್ಯ





## ಧಾರ್ಮಿಕ ಪತ್ರಿಕೆಗಳು ಮತ್ತು ಸಮಾಜ

–ಎಂ.ಬಿ. ಶಿವಕುಮಾರಸ್ವಾಮಿ *

ನಮ್ಮ ಭಾರತದೇಶದ ಉದ್ದಗಲಕ್ಕೂ, ಅನೇಕ ಧಾರ್ಮಿಕ ಪತ್ರಿಕೆಗಳು ಪ್ರಚಲಿತದಲ್ಲಿವೆ. ಎಲ್ಲಾ ಭಾಷೆ ಮತ್ತು ಧರ್ಮಗಳಲ್ಲಿಯೂ ಇಂತಹ ಪತ್ರಿಕೆಗಳು ತಮ್ಮ ಸ್ಥಿರತೆಯನ್ನು ಕಾಪಾಡಿಕೊಂಡು ಬಂದಿವೆ. ಈ ರೀತಿಯ ಪತ್ರಿಕೆಗಳಲ್ಲಿ ಕೆಲವು ಪಾಕ್ಷಿಕವಾಗಿ, ಮಾಸಿಕವಾಗಿ, ತ್ರೈಮಾಸಿಕವಾಗಿ, ದೈವಾರ್ಷಿಕವಾಗಿ ದೇಶದ ಎಲ್ಲೆಡೆ ಅದರಲ್ಲೂ ವಿಶೇಷವಾಗಿ ಕರ್ನಾಟಕದಲ್ಲಿ ಪ್ರಸಾರಗೊಳ್ಳುತ್ತಿವೆ. ಇಂತಹ ಪತ್ರಿಕೆಗಳು ಬಹುಪಾಲು ಸಂಘಸಂಸ್ಥೆಯ, ಧರ್ಮದರ್ಶಿ ಮಂಡಳಿಯ ಅಥವಾ ಮಠಮಾನ್ಯಗಳ ಅಥವಾ ಶ್ರೀಕ್ಷೇತ್ರಗಳ ಮೂಲಕವಾಗಿ ಪ್ರಕಟವಾಗುತ್ತಿವೆ.

ಧಾರ್ಮಿಕ ಪತ್ರಿಕೆಗಳ ಬಳಕೆ, ಉದ್ದೇಶ, ಅಗತ್ಯತೆ, ಅನಿವಾರ್ಯತೆ ಮತ್ತು ಪ್ರಯೋಜನ ಇಂದಿಗೂ ಇದೆ. ಇದಕ್ಕೆ ಕಾರಣ, ಇಂತಹ ಪತ್ರಿಕೆಗಳಿಂದ ಸಮಾಜದಲ್ಲಿ ಶಾಂತಿ, ಸೌಹಾರ್ದತೆ, ಭ್ರಾತೃತ್ವ, ಪ್ರೇಮ, ಪ್ರೀತಿ, ಭಕ್ತಿ ಆಚಾರ, ವಿಚಾರ, ಐಕ್ಯತೆ, ನೆಮ್ಮದಿ ಮುಂತಾದ ಗುಣಾತ್ಮಕ ಅಂಶಗಳು ದೊರಕಲಿವೆ.

ನಮ್ಮ ಭಾರತ ದೇಶದ ಸಂವಿಧಾನದಲ್ಲಿ ಅಡಗಿರುವ ಅನೇಕ ನಿಬಂಧನೆಗಳು, ಚಿಂತನೆಗಳು ಪ್ರಜಾಹಿತಕ್ಕಾಗಿ ಮಾಡಿರುವಂಥಹವು. ಇಂತಹ ಉಪಯುಕ್ತ ವಿಷಯಗಳು ಧಾರ್ಮಿಕ ಪತ್ರಿಕೆಗಳಿಂದಲೂ ಸಹ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸಿಗಲಿವೆ. ದೇಶದ ಕಾನೂನು ಪ್ರಜಾಹಿತಕ್ಕಾಗಿ ಮಾಡಿರುವುದು ಕಡ್ಡಾಯದ ಕ್ರಮ ಮತ್ತು ಅದನ್ನು ಪಾಲಿಸುವುದು ಎಲ್ಲರ ಕರ್ತವ್ಯ. ಇಂತಹ ಪ್ರಜಾಹಿತ ಅಂಶಗಳು ಧಾರ್ಮಿಕ ಪತ್ರಿಕೆಗಳಿಂದಲೂ ಸಹ ದೊರಕುವ ಸಾಧ್ಯತೆ ಇದೆ. ಆದರೆ, ಅದನ್ನು ಸ್ವೀಕರಿಸುವುದು ಅವರವರ ಇಚ್ಛೆಗೆ ಸೇರಿದುದಾಗಿರುತ್ತದೆ. ಆದರೆ, ಈ ಮಾರ್ಗದಲ್ಲಿ ಶಾಶ್ವತ ಸುಖ, ನೆಮ್ಮದಿ ಖಂಡಿತವಾಗಿಯೂ ಸಿಗುತ್ತದೆ.

ಧಾರ್ಮಿಕ ಪತ್ರಿಕೆಗಳೆಂದರೆ ಕೇವಲ ಮಾಹಿತಿಗಾಗಿ ಮಾತ್ರ ಎಂದು ಭಾವಿಸುವುದಕ್ಕಿಂತ ಅದರ ವ್ಯಾಪ್ತಿ ವಿಶಾಲ ಎಂದು ತಿಳಿಯುವುದು ಸರಿಯೆನಿಸಿದೆ. ಭಾರತ ದೇಶದಲ್ಲಿರುವ ಧರ್ಮ, ಸಂಸ್ಕೃತಿ, ಆಚಾರ, ವಿಚಾರ ಅಥವಾ ಸಮಾಜಕ್ಕೆ ಬೇಕಾಗಿರುವ ಸಂದೇಶ ಇಂತಹ ಪತ್ರಿಕೆಗಳಿಂದ ಸಿಗುವ ಸಾಧ್ಯತೆ ಇದೆ. ಆದುದರಿಂದ ಅವುಗಳನ್ನು ಉತ್ತೇಜಿಸುವುದು ಮತ್ತು ಜನಪ್ರಿಯಗೊಳಿಸುವುದು ಎಲ್ಲರ ಕರ್ತವ್ಯ.

ಸಂವಿಧಾನಕ್ಕೆ ವಿರೋಧವಾದ ಅಥವಾ ಪೂರಕವಲ್ಲದ ಅಥವಾ ದೇಶದ ಐಕ್ಯತೆಯನ್ನು ಒಡೆಯುವ, ಘರ್ಷಣೆಯನ್ನು ಉತ್ತೇಜಿಸುವ ಅಥವಾ ಶಾಂತಿಯನ್ನು ಕದಡುವ ವಿಷಯಗಳು ಧಾರ್ಮಿಕ ಪತ್ರಿಕೆಗಳಲ್ಲಿ ಮೂಡಿ ಬರುವ ಸಾಧ್ಯತೆ ಕಡಿಮೆ ಅಥವಾ ಇರುವುದಿಲ್ಲ. ಏಕೆಂದರೆ ಇದರಲ್ಲಿ ಸಮಾಜದ ಹಿತವೇ ಮುಖ್ಯ ಗುರಿಯಾಗಿರುತ್ತದೆ.

ಎಲ್ಲ ಧರ್ಮಗಳ ಸಾರ ಒಂದೇ ಆಗಿರುತ್ತದೆ. ಅದು ಅಹಿಂಸೋಪದೇಶ, ಪರಮತ ಸಹಿಷ್ಣುತೆಯನ್ನು ಬಿಂಬಿಸುವುದು, ಮಾನವ-ಮಾನವನನ್ನು ಪ್ರೀತಿಸುವುದು. ಇಂತಹ ಸದ್ಗುಣಗಳನ್ನು ತಿಳಿಸುವ ಸಾಧನಗಳಲ್ಲಿ ಧಾರ್ಮಿಕ ಪತ್ರಿಕೆಯೂ ಒಂದು ಸಾಧನ.

ಕರ್ನಾಟಕದ ಅನೇಕ ಭಾಗಗಳಲ್ಲಿ ಧಾರ್ಮಿಕ ಪತ್ರಿಕೆಗಳು ತಮ್ಮ ಛಾಪನ್ನು ಮೂಡಿಸಿವೆ. ಅವೆಲ್ಲವೂ ಹೆಚ್ಚಿನಪಾಲು ಶ್ರೀಕ್ಷೇತ್ರಗಳಿಂದ ಅಥವಾ ಮಠಮಾನ್ಯಗಳಿಂದ ಪ್ರಸಾರಗೊಳ್ಳುತ್ತಿವೆ. ಮಲೆ ಮಹದೇಶ್ವರ ಬೆಟ್ಟದ 'ಶ್ರೀ ಮಹದೇಶ್ವರ ದರ್ಶನಮ್', ಸುತ್ತೂರು ಮಠದ 'ಪ್ರಸಾದ', ಶ್ರೀಕ್ಷೇತ್ರ ಧರ್ಮಸ್ಥಳದ 'ಮಂಜುವಾಣಿ', ಇದಕ್ಕೆ ಕೆಲವು ನಿದರ್ಶನಗಳು. ಶ್ರೀಮಠಗಳಾದ ಸಿರಿಗೆರೆ, ಮುರುಘ, ಮೃತ್ಯುಂಜಯ, ಸಿದ್ಧಗಂಗಾ, ಬಸವಪೀಠ, ಮಲೆನಾಡಿನ, ಕರಾವಳಿಯ, ಉತ್ತರ ಕರ್ನಾಟಕದ ಮತ್ತು ಹಳೇ ಮೈಸೂರಿನ ಅನೇಕ ಧರ್ಮಪೀಠಗಳು ಶ್ರೀಕ್ಷೇತ್ರಗಳು, ಮತ್ತು ಗುರುಪೀಠಗಳು ಈ ಸೇವಾ ಕಾರ್ಯದಲ್ಲಿ ತೊಡಗಿಸಿಕೊಂಡಿವೆ. ಇದು ಈ ನಾಡಿನ ಸೌಭಾಗ್ಯ.

* 'ಬಸವರಾಜ ನಿಲಯ', ರಾಮಾನುಜ ರಸ್ತೆ, 9ನೇ ತಿರುವು, ಅಗ್ರಹಾರದ ಹಿಂಭಾಗ, ಖಿಲ್ಲೆ ಮೊಹಲ್ಲಾ, ಮೈಸೂರು.

ಈ ರೀತಿಯಾದ ಧಾರ್ಮಿಕ ಪತ್ರಿಕೆಗಳನ್ನು ಪ್ರಕಟಿಸುತ್ತಿರುವುದು ಯಾವುದೇ ಕಾರಣಕ್ಕೂ ಧೃತಿಗೆಡದೆ ಉತ್ತಮವಾದ ಮತ್ತು ಸಮಾಜಕ್ಕೆ ಅನುಕೂಲವಾದ, ಆಬಾಲವೃದ್ಧರಾಗಿ ಬಯಸುವ ಹಾಗೂ ಸಂವಿಧಾನದ ಮೂಲೋದ್ದೇಶವನ್ನು ಎತ್ತಿ ಹಿಡಿಯುವ ಗುರುಹಿರಿಯರನ್ನು ಗೌರವಿಸುವಂತಹ, ದೇವರನ್ನು ಭಕ್ತಿಭಾವದಿಂದ ಪೂಜಿಸುವಂತಹ ನೈತಿಕತೆಗೆ ಒತ್ತು ಕೊಡುವಂತಹ ಶಿಕ್ಷಣ, ಆರೋಗ್ಯ ದಾಸೋಹದ ಮಹತ್ವವನ್ನು ಎತ್ತಿ ಹಿಡಿಯುವಂತಹ, ಪರಿಸರ ಸಂರಕ್ಷಣೆಗೆ ಯೋಗ್ಯವಾದ ದೇಶದ ಐಕ್ಯತೆಯನ್ನು ಬಿಂಬಿಸುವ ಆದರ್ಶ ಮಹಾಮಹಿಮರ ಸಂದೇಶಕ್ಕೆ ಒತ್ತುಕೊಡುವ ಕವನ ಲೇಖನಗಳಿಗೆ ಮತ್ತು ಸಚಿತ್ರಗಳಿಗೆ ಆದ್ಯತೆ ನೀಡುವುದು ಇಂದಿನ ನಾಗರಿಕ ಪ್ರಪಂಚಕ್ಕೆ ಸರಿಯೆನಿಸಲಿದೆ. ಈಗಲೂ ಸಹ ನಮ್ಮಲ್ಲಿರುವ ಅನೇಕ ಧಾರ್ಮಿಕ ಪತ್ರಿಕೆಗಳು ಈ ರೀತಿಯಾಗಿಯೇ ಪ್ರಸಾರಗೊಳ್ಳುತ್ತಿವೆ. ಅವುಗಳು ಈ ಮಾರ್ಗದಲ್ಲಿ ಇನ್ನಷ್ಟು ಬಲಗೊಳ್ಳುವುದು ಅವಶ್ಯಕ.

ನಮ್ಮ ಕರ್ನಾಟಕದಲ್ಲಿರುವ ಅನೇಕ ಪೂಜ್ಯರು, ಮಠಾಧೀಶರು, ಧರ್ಮಾಧಿಕಾರಿಗಳು ಹಾಗೂ ಸಂಘಸಂಸ್ಥೆಗಳು ಧಾರ್ಮಿಕ ಪತ್ರಿಕೆಗಳ ಗುಣಮಟ್ಟವನ್ನು ಕಾಯ್ದುಕೊಂಡಿದ್ದಾರೆ. ಅವರ ಈ ಸೇವೆ ಹರಿಯುವ ನೀರಿನಂತೆ ಸಾಗುತ್ತಿದೆ. ಈ ನಿಟ್ಟಿನಲ್ಲಿ ಆದಾಯ ಮತ್ತು ಖರ್ಚಿನ ಸಮತೋಲನವನ್ನು ಕಾಯ್ದುಕೊಂಡು ಇಂತಹ ಪತ್ರಿಕೆಗಳ ಪ್ರಸಾರದ ಸ್ಥಿರತೆಯನ್ನು ಕಾಪಾಡಿಕೊಳ್ಳುವುದು ಹಾಗೂ ಓದುಗರಿಗೆ ಹೊರೆಯಾಗದ ರೀತಿಯಲ್ಲಿ ಬೆಲೆ ನಿಗದಿಪಡಿಸಿ ಪ್ರಕಟಿಸುವುದು ಒಂದು ಸಾಹಸದ ಕೆಲಸವಾಗಿದೆ. ಈಗ ಟಿ.ವಿ. ಮುಂತಾದ ಪ್ರಸಾರ ಮಾಧ್ಯಮಗಳು ಜನರನ್ನು ಆಕರ್ಷಿಸುವುದರಲ್ಲಿ ಯಶಸ್ವಿಯಾಗಿವೆ. ಆದ ಕಾರಣ, ಧಾರ್ಮಿಕ ಪತ್ರಿಕೆಗಳ ಸ್ಥಿರತೆಗಾಗಿ ಸಂಬಂಧಿಸಿದವರು ಎಚ್ಚರ ವಹಿಸುವುದು ಅಗತ್ಯ. ಹಾಗೆಯೇ ಈ ಪತ್ರಿಕೆಗಳಿಗೆ ಆಧಾರಸ್ತಂಭವಾಗಿರುವ ಪೋಷಕರು ಮತ್ತು ಓದುಗರ ಪ್ರೋತ್ಸಾಹವು ಅಷ್ಟೇ ಮುಖ್ಯವಾಗಿದೆ.

ಒಟ್ಟಾರೆ ಧಾರ್ಮಿಕ ಪತ್ರಿಕೆಗಳು ನಮ್ಮ ಜನಜೀವನದಲ್ಲಿ ಹಾಸುಹೊಕ್ಕಾಗಿದೆ ಎಂಬುದು ಮಾತ್ರ ನಿತ್ಯಸತ್ಯ ಮತ್ತು ಸರ್ವವಿದಿತ. □

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

'ಸಿದ್ಧಗಂಗಾ' ಮುನ್ನಡೆಗೆ ಇರುವ ಆರ್ಥಿಕ ಪರಿಸ್ಥಿತಿ ಯನ್ನು ನಿಮ್ಮ ಗಮನಕ್ಕೆ ನಿವೇದಿಸಿಕೊಳ್ಳಲಾಗುತ್ತಿದೆ. ಈ ಸಮಸ್ಯೆಯನ್ನು ಮನಗಂಡು ಆಜೀವ ಸದಸ್ಯರು ಸ್ಪಂದಿಸಿ ಹೆಚ್ಚುವರಿ ಚಂದಾ ೫೦೦ ರೂ./೬೦೦ ರೂ. ಉದಾರತೆಯಿಂದ ಸಂದಾಯ ಮಾಡುತ್ತಿದ್ದಾರೆ. ಅವರಿಗೆ ಶ್ರೀಮಠದ ಪರವಾಗಿ ಧನ್ಯವಾದಗಳು.

ಸಂದಾಯ ಮಾಡದೆ ಇರುವವರಲ್ಲಿ ನಮ್ಮ ವಿನಂತಿ ಏನೆಂದರೆ ಪ್ರಸ್ತುತವಿರುವ ಆಜೀವ ಚಂದಾ ೧೦೦೦/- ರೂ.ಗೆ. ಸರಿಹೊಂದುವಂತೆ ಉಳಿಕೆ ೫೦೦/- ರೂ./ ೪೦೦/- ರೂ. ಶೀಘ್ರವಾಗಿ ಸಂದಾಯ ಮಾಡಿ 'ಸಿದ್ಧಗಂಗಾ' ನಿರಂತರವಾಗಿ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ಕೋರುತ್ತೇವೆ.

ತಮ್ಮ ವಿಳಾಸದಲ್ಲಿರುವ LM ನಂಬರ್ ಸೂಚಿಸಿ ಬಾಕಿ ಆಜೀವ ಚಂದಾವನ್ನು ನಗದು/ ಎಂ.ಒ/ ಚೆಕ್/ಡಿ.ಡಿ. ಮೂಲಕ 'ಸಿದ್ಧಗಂಗಾ' ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ದಯಮಾಡಿ ಕಳಿಸಲು ವಿನಂತಿಸಿಕೊಳ್ಳಲಾಗಿದೆ.

ನಿಮ್ಮ ವಿಳಾಸ ಬದಲಾದಾಗ ನಿಮಗೆ ಕೊಟ್ಟಿರುವ ಆಜೀವ ಸದಸ್ಯತ್ವದ ನಂಬರನ್ನು ತಪ್ಪದೆ ತಿಳಿಸಿರಿ. ಇದರಿಂದ ನೇರವಾಗಿ ಪತ್ರಿಕೆ ನಿಮಗೆ ತಲುಪಲು ಸಾಧ್ಯವಾಗುತ್ತದೆ. ಆಗಾಗ್ಗೆ ಬದಲಾಗುವ ನಿಮ್ಮ ಹೊಸ ವಿಳಾಸವನ್ನು ಪತ್ರಿಕಾ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

ಪ್ರಕಾಶಕರು
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೪೩.





# ಕರ್ನಾಟಕ ಏಕೀಕರಣ ಹೋರಾಟದ ಒಂದು ನೆನಪು !

-ಯೋಗೀಶ್ ನಿರ್ವಿಕಲ್ಪ *

ದೇಶಪ್ರೇಮಿ ಹಾಗೂ ಕವಿ ಹುಯಿಲಗೋಳ ನಾರಾಯಣರವರ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ನಾಡಗೀತೆಯನ್ನು ೧೯೨೪ರ ಬೆಳಗಾವಿ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಹಾಡಲಾಯಿತು. ಅಧಿವೇಶನದ ಅಧ್ಯಕ್ಷತೆಯನ್ನು ಮಹಾತ್ಮಾಗಾಂಧೀಜಿ ವಹಿಸಿದ್ದರು. ಅಂದು ಕನ್ನಡ ಭಾಷಾಭಿಮಾನ ಸಾತ್ವಿಕ ಕಿಚ್ಚು ಪ್ರತಿಯೊಬ್ಬ ಕನ್ನಡಿಗರ ಮನದಲ್ಲಿಯೂ ಉದಯಿಸಿತು. ಅಂದಿನ ಅಧಿವೇಶನದಲ್ಲಿ ಪ್ರತ್ಯೇಕ ಕನ್ನಡ ಪ್ರಾಂತ್ಯ ರಚನೆಯ ಬೇಡಿಕೆ ಮಂಡಿಸಲಾಗಿತು. ಮಹಾತ್ಮಾಜಿ ಸಹ ಕನ್ನಡ ಪ್ರಾಂತ್ಯ ರಚನೆಯ ಬೇಡಿಕೆಗೆ ತಮ್ಮ ಸಹಮತ ವ್ಯಕ್ತಪಡಿಸಿದರು. ಅಧಿವೇಶನದ ಮುಖ್ಯ ಆಶಯಗಳೊಂದಿಗೆ ಕರ್ನಾಟಕ ಪ್ರಾಂತ್ಯ ರಚನೆಯ ಕನಸೂ ಸಹ ಸಮರಸಗೊಂಡಿದ್ದವು. ಸಮಸ್ತ ಕನ್ನಡ ಜನತೆಯ ಮನದಲ್ಲಿ ಕರ್ನಾಟಕ ಪ್ರಾಂತ್ಯ ರಚನೆಯ ಹೊಸ ಹೊಸ ಕನಸುಗಳು ಅರಳಲಾರಂಭಿಸಿದವು.

ನಮ್ಮ ಕನ್ನಡನಾಡು ಪ್ರಾಕೃತಿಕ-ಸಾಂಸ್ಕೃತಿಕ ಹಾಗೂ ರಾಜಕೀಯವಾಗಿ ಅಖಂಡತ್ವವನ್ನು ಸದಾ ಕಾಪಾಡಿಕೊಂಡು ಬಂದುದನ್ನು ನಾವು ಕಾಣಬಹುದು. ೧೫೬೫ರಲ್ಲಿ ವಿಜಯನಗರ ಸಾಮ್ರಾಜ್ಯ ಪತನದ ನಂತರ ಅಖಂಡತೆಗೆ ಸ್ವಲ್ಪ ಮಟ್ಟಿನ ಧಕ್ಕೆ ಉಂಟಾಯಿತು. ಆನಂತರ ಮೈಸೂರು ಅರಸರ ಕಾಲದಲ್ಲಿ ಕರ್ನಾಟಕದ ಬಹುಭಾಗ ರಾಜಕೀಯವಾಗಿ ಒಂದಾಗಿದ್ದುದನ್ನು ನಾವು ಕಾಣಬಹುದು. ೪ನೆಯ ಮೈಸೂರು ಯುದ್ಧದಲ್ಲಿ ಟಿಪ್ಪುವಿನ ಪತನದ ನಂತರ ಭಾರತದಲ್ಲಿ ಬ್ರಿಟಿಷರ ಆಡಳಿತ ವ್ಯವಸ್ಥೆ ಸ್ಥಿರಗೊಂಡಿತು. ಕರ್ನಾಟಕದ ವಿವಿಧ ಭಾಗಗಳು ೨೪ ಆಡಳಿತ ವ್ಯವಸ್ಥೆಯ ಅಡಿಯಲ್ಲಿ ಹಂಚಿಹೋದವು. ಕನ್ನಡ ನಾಡು ಮುಂಬೈ, ಹೈದರಾಬಾದ್ ಹಾಗೂ ಮದ್ರಾಸ್, ಮೈಸೂರು ಹೀಗೆ ಹಲವು ಕಡೆ ಹರಿದು ಹಂಚಿ ಹೋದವು. ತದನಂತರ ಕರ್ನಾಟಕ ಏಕೀಕರಣ ಹೋರಾಟದ ಇತಿಹಾಸ ಪ್ರಾರಂಭಗೊಳ್ಳುತ್ತದೆ. ೧೮ನೇ ಶತಮಾನದ ಕೊನೆಯ ದಶಕದಲ್ಲಿ ಆರಂಭಗೊಂಡ ಏಕೀಕರಣ ಹೋರಾಟ ೧೯೫೬ರವರೆಗೆ ವಿವಿಧ ಹಂತಗಳಲ್ಲಿ ಸಾಗಿ ಹೋಗಿದ್ದು ಒಂದು ಇತಿಹಾಸ.

ಕನ್ನಡ ಶಬ್ದಕೋಶದ ನಿರ್ಮಾತೃ ಹಾಗೂ ಭಾಷಾ ಶಾಸ್ತ್ರಜ್ಞರಾದ ಕಿಟಲ್ ಹಾಗೂ ಪತ್ರಿಕಾ ಪಿತಾಮಹರೆನಿಸಿದ ಮಂಗಳೂರಿನ ಬಾಶಲ್ ಮಿಷನ್ನಿನ ಪಾದ್ರಿಗಳು ಕನ್ನಡ ಭಾಷೆಯ ಅಸ್ತಿತ್ವ ಹಾಗೂ ಸ್ಥಾನಮಾನಕ್ಕಾಗಿ ನಡೆಸಿದ ಅವಿರತ ಪ್ರಯತ್ನಗಳು ಅತ್ಯಂತ ಸ್ಮರಣೀಯವಾದುದು. ಸರ್ ವಾಲ್ಟರ್ ಎಂಬ ಆಂಗ್ಲ ಅಧಿಕಾರಿಯಿಂದ ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಕನ್ನಡ ಭಾಷೆಯ ರಕ್ಷಣೆ ಮತ್ತು ಅಸ್ತಿತ್ವಕ್ಕಾಗಿ ಪ್ರಚೋದನಾ ಚಳುವಳಿಯು ಸಹಕಾರ ದೊರೆಯುತ್ತದೆ. ಬೆಳಗಾವಿಯ ಕಂದಾಯ ವಿಭಾಗದ ಆಯುಕ್ತರಾಗಿದ್ದ ಆಂಗ್ಲ ಅಧಿಕಾರಿ ಚಾಪ್‌ಮನ್ ಮತ್ತು ವಿದ್ಯಾಧಿಕಾರಿ ಡೆಪ್ಯುಟಿ ಚೆನ್ನಬಸಪ್ಪ ಮುಂತಾದ ಮಹನೀಯರುಗಳಿಂದ ಕನ್ನಡಪರ ಹೋರಾಟ ಮತ್ತಷ್ಟು ಚುರುಕುಗೊಳ್ಳುತ್ತದೆ. ಕನ್ನಡ ಶಾಲೆಗಳನ್ನು ಪ್ರಾರಂಭಿಸಲು ಸಹ ಇವರು ಮುಂದಾಗುತ್ತಾರೆ. ೧೮೯೦ರಲ್ಲಿ ಧಾರವಾಡಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ ಸ್ಥಾಪನೆಗೊಂಡು, ಕನ್ನಡ ನಾಡ ಸೇವೆಗೆ ಕಂಕಣ ತೊಡುತ್ತದೆ. ೧೯೦೫ರಲ್ಲಿ ಬಂಗಾಲಪ್ರಾಂತ್ಯ ವಿಭಜನೆಗೊಂಡಾಗ ಕನ್ನಡ ಜನತೆಯಲ್ಲಿಯೂ ತಮ್ಮ ಭಾಷೆಯ ಪ್ರಾಂತ್ಯಾಭಿಮಾನ ಜಾಗೃತಗೊಳ್ಳುತ್ತದೆ. ೧೯೧೫ರಲ್ಲಿ ಹಳೇ ಮೈಸೂರು ಪ್ರಾಂತ್ಯದಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತು ಮತ್ತು ಬೆಂಗಳೂರಿನ ಕಡೆ ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪನೆಗೊಳ್ಳುತ್ತದೆ. ಕನ್ನಡಪರ ಜಾಗೃತಿ-ಸಂಘಟನೆ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳ ಮೂಲಕ ಕರ್ನಾಟಕ ಏಕೀಕರಣದ ಹೋರಾಟಕ್ಕೆ ಈ ಸಂಘಟನೆಗಳು ಮುನ್ನುಡಿ ಬರೆಯಲಾರಂಭಿಸಿದವು. ಕರ್ನಾಟಕ ಏಕೀಕರಣ ಹೋರಾಟ ಒಂದು ಸಾಂಸ್ಕೃತಿಕ ಸ್ವರೂಪ ಪಡೆದುಕೊಂಡಿತ್ತು.

ಕರ್ನಾಟಕ ಪ್ರಾಂತ್ಯ ರಚನೆಯ ಬೇಡಿಕೆಯ ಧ್ವನಿ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ನಡೆದ ಪ್ರಥಮ ಸಮ್ಮೇಳನದಲ್ಲಿ ಪ್ರಬಲವಾಗಿ ಪ್ರತಿಧ್ವನಿಸಿತು. ಕರ್ನಾಟಕದ ರಾಜಕೀಯ ಏಕೀಕರಣ ಸಾಧಿಸುವ ದಿಕ್ಕಿನಲ್ಲಿ ೧೯೧೭ರಲ್ಲಿ ಕಡಪ ರಾಘವೇಂದ್ರರಾವ್, ಮುದವೀಡು ಕೃಷ್ಣರಾವ್, ಗದಿಗಯ್ಯ, ಹೊನ್ನಾಪುರ ಮಠ ಮುಂತಾದವರ ಪ್ರಯತ್ನದಲ್ಲಿ ಕರ್ನಾಟಕ

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ -577 202.

ಸಭೆಯ ರಚನೆಯಾಗಿತು. ಭಾರತದ ಕಾರ್ಯದರ್ಶಿಯಾಗಿದ್ದ, ಮಾಂಟೆಗೋರವರಿಗೆ ಕನ್ನಡ ನಾಡಿನ ಪ್ರತಿಯೊಂದು ಕಡೆಯಿಂದಲೂ ಕರ್ನಾಟಕ ಪ್ರಾಂತ್ಯ ರಚನೆಯ ಬೇಡಿಕೆಯ ಮನವಿ ಪತ್ರಗಳನ್ನು ಕಳುಹಿಸಿಕೊಡಲಾಯಿತು. ನಂತರ ಭಾರತ ರಾಷ್ಟ್ರೀಯ ಕಾಂಗ್ರೆಸ್‌ಗೂ ಹಾಗೂ ಕರ್ನಾಟಕ ಸಭೆಗೂ ನಿಕಟ ಸಂಪರ್ಕ ಉಂಟಾಯಿತು. ಇದರ ಪರಿಣಾಮ ಕರ್ನಾಟಕ ಏಕೀಕರಣದ ಆಶಯದ ಕನಸುಗಳು ಮತ್ತಷ್ಟು ಗಟ್ಟಿಗೊಳ್ಳತೊಡಗಿದವು.

೧೯೨೦ರಲ್ಲಿ ಧಾರವಾಡದಲ್ಲಿ ಮೈಸೂರಿನ ದಿವಾನರಾಗಿದ್ದ ವಿ.ಪಿ. ಮಾಧವರಾಯರ ಅಧ್ಯಕ್ಷತೆಯಲ್ಲಿ ಮೊಟ್ಟ ಮೊದಲ ಕರ್ನಾಟಕ ರಾಜಕೀಯ ಸಮ್ಮೇಳನ ನಡೆಯಿತು. ಸಮ್ಮೇಳನದಲ್ಲಿ ಕರ್ನಾಟಕ ಪ್ರಾಂತ್ಯ ರಚನೆಯ ನಿರ್ಣಯ ಕೈಗೊಳ್ಳಲಾಯಿತು. ೧೯೩೧ರಲ್ಲಿ ಲಂಡನ್ನಿನಲ್ಲಿ ನಡೆದ ದುಂಡುಮೇಜಿನ ಪರಿಷತ್ತಿನಲ್ಲಿ ಬೆನಗಲ್ ರಾಮರಾವ್, ಬೆನಗಲ್ ಶಿವರಾವ್ ಹಾಗೂ ಮಿರ್ಜಾ ಇಸ್ಮಾಯಿಲ್‌ರವರು ಕರ್ನಾಟಕ ಏಕೀಕರಣದ ಕುರಿತು ಗಮನ ಸೆಳೆದರು. ೧೯೨೮-೨೯ರಲ್ಲಿಯೂ ಸೈಮನ್‌ಕಮಿಟಿಯ ಮುಂದೆಯೂ ಕರ್ನಾಟಕ ಏಕೀಕರಣದ ಬೇಡಿಕೆಯನ್ನು ಪ್ರಸ್ತಾಪಿಸಲಾಯಿತು ಆ ಸಮಿತಿಯು ಸಹ ಭಾಷೆಗಳ ಆಧಾರದ ಮೇಲೆ ಪ್ರಾಂತ್ಯಗಳ ರಚನೆಗೆ ಸಹಮತ ವ್ಯಕ್ತಪಡಿಸಿತು. ಇವುಗಳೆಲ್ಲದರ ಪರಿಣಾಮ ಕನ್ನಡನಾಡಿನ ಜನತೆಯಲ್ಲಿ ಸಾಕಷ್ಟು ಜಾಗೃತಿ ಉಂಟಾಯಿತು. ಸ್ವತಂತ್ರ ಕರ್ನಾಟಕ ಮತ್ತು ಸಂಯುಕ್ತ ಕರ್ನಾಟಕದಂತಹ ಪತ್ರಿಕೆಗಳು ಕರ್ನಾಟಕ ಪ್ರಾಂತ್ಯ ರಚನೆಯ ಹೋರಾಟಕ್ಕೆ ಆಸರೆಗಳಾದವು.

ಭಾರತ ಸ್ವಾತಂತ್ರ್ಯ ಪಡೆಯುವವರೆಗೂ ಕರ್ನಾಟಕ ಪ್ರಾಂತ್ಯ ರಚನೆ ಅಸಾಧ್ಯವೆಂಬ ವಿಚಾರ ಕನ್ನಡಪರ ಹೋರಾಟಗಾರರು ತಿಳಿದಿದ್ದರು. ಆದರೆ ಯಾವುದೇ ಸಂದರ್ಭದಲ್ಲಿಯೂ ಹೋರಾಟದ ಕಾವನ್ನು ಕಡಿಮೆ ಮಾಡಿಕೊಳ್ಳಲಿಲ್ಲ. ಸ್ವಾತಂತ್ರ್ಯ ಮತ್ತು ಕರ್ನಾಟಕ ಏಕೀಕರಣದ ಹೋರಾಟಗಳೆರಡನ್ನೂ ಜೊತೆಜೊತೆಯಾಗಿಯೇ ನಡೆಸಿಕೊಂಡು ಬಂದದ್ದು ಒಂದು ವಿಶೇಷ. ಭಾರತೀಯರೆಲ್ಲರ ಅಹಿಂಸಾತ್ಮಕ ಹೋರಾಟದ ಫಲವಾಗಿ ದೇಶ ೧೯೪೭ರಲ್ಲಿ ಸ್ವಾತಂತ್ರ್ಯ ಪಡೆಯಿತು. ಆನಂತರ ದೇಶದ ಮುಂದೆ ಸಂಸ್ಥಾನಗಳ ವಿಲೀನಿಕರಣ ಹಾಗೂ ಭಾಷಾವಾರು ಪ್ರಾಂತ್ಯಗಳ ರಚನೆಯ ಬೇಡಿಕೆಗಳು ಅತಿ ದೊಡ್ಡ ಸಮಸ್ಯೆಗಳಾಗಿ ಕಾಡಲಾರಂಭಿಸಿದವು. ಸಂಸ್ಥಾನಗಳ ವಿಲೀನಿಕರಣಗೊಳ್ಳದೆ ಭಾಷಾವಾರು ಪ್ರಾಂತ್ಯ ರಚನೆಗೆ ಯಾವುದೇ ಅರ್ಥವೇ ಇರಲಿಲ್ಲ. ಭಾರತ ವಿಲೀನಿಕರಣದ ಪ್ರಕ್ರಿಯೆಗೆ ಕರ್ನಾಟಕದಲ್ಲಿ ಜನಾಂದೋಲನ ಸಂಘಟಿಸಿದವರಲ್ಲಿ ಶರಣರಾದ ಮುರುಗೋಡ ಮಹಾದೇವರು- ಎಂ.ಎಸ್. ಪಟ್ಟಣ-ಶಾಂತಿನಾಥ ಇಂಗಳೆ-ಕಳ್ಳಿ ತಿಪ್ಪಣ್ಣ ಹಾಗೂ ಚಿನ್ನಪ್ಪವಾಲಿ ಪ್ರಮುಖರು. ಹುಬ್ಬಳ್ಳಿಯ ಇಂಚಗೇರಿ ಸಂಪ್ರದಾಯದ ಮುರುಗೋಡ ಮಹಾದೇವರ ಗಿರೀಶ್‌ಆಶ್ರಮ ಜನಾಂದೋಲನದ ಶಕ್ತಿ ಕೇಂದ್ರವಾಗಿ ಪರಿವರ್ತನೆ ಗೊಂಡಿತ್ತು. ಅಹಿಂಸಾತ್ಮಕ ಹೋರಾಟದ ಮೂಲಕ ಆಯಾ ಸಂಸ್ಥಾನಗಳ ರಾಜರುಗಳ ವಿಲೀನಿಕರಣದ ಒಪ್ಪಿಗೆ ಸಹ ಪಡೆದರು. ಹೈದರಾಬಾದ್ ನಿಜಾಮ ತಾನು ಭಾರತ ಸರ್ಕಾರದಲ್ಲಿ ಸೇರಲು ಸಮ್ಮತಿಸದೇ ತಾನು ಸ್ವತಂತ್ರನೆಂದು ಘೋಷಿಸಿದನು. ಹೈದರಾಬಾದ್-ಕರ್ನಾಟಕ ಪ್ರದೇಶದ ಗುಲ್ಬರ್ಗ-ಬೀದರ್-ಕೊಪ್ಪಳ- ರಾಯಚೂರು ಮುಂತಾದ ಭಾಗದ ಕನ್ನಡಿಗರ ಮೇಲೆ ಅಗಾಧವಾದ ದೌರ್ಜನ್ಯ ನಡೆಸಲಾಯಿತು. ಇತಿಹಾಸದಲ್ಲಿ ಈ ದೌರ್ಜನ್ಯವನ್ನು ***'ರಜಕಾರರ ದಾಳಿ'*** ಎಂದೇ ಕರೆಯಲಾಗಿದೆ.

ರಜಕಾರರ ಧಾಳಿಯನ್ನು ತಡೆಯಲು ಆ ಸಂದರ್ಭದಲ್ಲಿ ಮುರಗೋಡ ಮಹಾದೇವರು ಮತ್ತು ಶಿವಮೂರ್ತಿ ಸ್ವಾಮಿ ಅಳವಂಡಿಯವರು ಹೈದರಾಬಾದ್ ಕರ್ನಾಟಕ ಪ್ರದೇಶಗಳತ್ತ ಬಂದು ಕನ್ನಡ ಜನತೆಗೆ ರಕ್ಷಣೆ ಒದಗಿಸಿದರು. ಮುಂದೆ ಗೋವಾ ವಿಮೋಚನೆಯಲ್ಲಿಯೂ ಇವರುಗಳ ಪಾತ್ರ ಅನನ್ಯವಾದುದು. ದೇಶಾದ್ಯಂತ ಭಾಷಾವಾರು ಪ್ರಾಂತ್ಯ ರಚನೆಯ ಆಂದೋಲನಗಳು ಉಗ್ರ ಸ್ವರೂಪ ಪಡೆಯಲಾರಂಭಿಸಿದವು. ೧೯೪೮ರ ಜೂನ್‌ನಲ್ಲಿ ಕೇಂದ್ರ ಸರ್ಕಾರ ಭಾಷಾವಾರು ಪ್ರಾಂತ್ಯ ರಚನೆಯ ಕುರಿತು ಅಧ್ಯಯನ ಮಾಡಿ ವರದಿ ಸಲ್ಲಿಸಲು ನಿವೃತ್ತ ನ್ಯಾಯಾಧೀಶರಾದ ಎಸ್.ಕೆ. ಧಾರ್ ನೇತೃತ್ವದಲ್ಲಿ ಆಯೋಗ ರಚಿಸಿತು. ಧಾರ್ ಆಯೋಗ ಭಾಷಾವಾರು ಪ್ರಾಂತ್ಯ ರಚನೆಯ ಕುರಿತು ತನ್ನ ವಿರೋಧ ಅಭಿಪ್ರಾಯ ವ್ಯಕ್ತಪಡಿಸಿತು. ಮುಂದೆ ಆಂಧ್ರದ ಹೋರಾಟಕ್ಕೆ ಮಣಿದ ಕೇಂದ್ರ ಸರ್ಕಾರ ೧೯೫೨ರಲ್ಲಿ ರಾಜಸ್ಥಾನದ ನಿವೃತ್ತ ನ್ಯಾಯಾಧೀಶರಾದ ಕೆ.ಎಲ್. ವಾಂಛೂ ನೇತೃತ್ವದಲ್ಲಿ ಒಂದು ಸಮಿತಿ ರಚಿಸಿತು. ೧೯೫೩ರ ಫೆಬ್ರವರಿ ೭ರಂದು ಸಲ್ಲಿಸಿದ ವಾಂಛ್ ವರದಿ ಬಳ್ಳಾರಿ ಜಿಲ್ಲೆಯ ಹಲವಾರು ಪ್ರದೇಶಗಳನ್ನು ಆಂಧ್ರಕ್ಕೆ ಸೇರಿಸುವ ಅಭಿಪ್ರಾಯ ವ್ಯಕ್ತಪಡಿಸಿತು. ೧೯೫೩ರ ಆಗಸ್ಟ್ ೧೦ರಂದು ಲೋಕಸಭೆಯಲ್ಲಿ ಈ ಮಸೂದೆ ಅಂಗೀಕರಿಸಲ್ಪಟ್ಟಿತು. ಅಕ್ಟೋಬರ್೧ ೧೯೫೩ರಂದು ಆಂಧ್ರಪ್ರದೇಶ ಮೊದಲ ದಕ್ಷಿಣ ಭಾರತದ ರಾಜ್ಯವಾಗಿ ಅಸ್ತಿತ್ವಕ್ಕೆ ಬಂದಿತು. ಕನ್ನಡ ಭಾಷಾವಾರು ಪ್ರದೇಶಗಳು ಆಂಧ್ರಕ್ಕೆ ಸೇರಿಸಿದ ಕಾರಣ ಕನ್ನಡಿಗರು ಆಕ್ರೋಶಕ್ಕೊಳಗಾದರು. ಉಳಿದ ರಾಜ್ಯ ರಚನೆಯ ಉದ್ದೇಶದಿಂದ ೧೯೫೩ರ ಡಿಸೆಂಬರ್ ೨೯ರಂದು ಸೈಯ್ಯದ್ ಫಜಲ್ ಆಲಿರವರ ಅಧ್ಯಕ್ಷತೆಯಲ್ಲಿ ರಾಜ್ಯ ಪುನರ್ ವಿಂಗಡಣೆಗೆ ಕೇಂದ್ರ ಸರ್ಕಾರ ಆಯೋಗವೊಂದನ್ನು ಸಹ ರಚಿಸಿತು.

ಕನ್ನಡ ನಾಡಿನ ಪ್ರದೇಶಗಳನ್ನು ಆಂಧ್ರಕ್ಕೆ ಸೇರಿಸಿದ ಸಂಬಂಧ ಹುಬ್ಬಳ್ಳಿಯಲ್ಲಿ ಸಾವಿರಾರು ಕನ್ನಡಾಭಿಮಾನಿಗಳು ಆಮರಣ ಉಪವಾಸ ಸತ್ಯಾಗ್ರಹ ಕೈಗೊಂಡರು. ಹುಬ್ಬಳ್ಳಿಯ ಗುಳ್ಳವ್ವನ ಕಟ್ಟೆಯಲ್ಲಿ ರೈತರು ಸಹ ಉಗ್ರವಾಗಿ ಪ್ರತಿಭಟಿಸಿದರು. ಸತ್ಯಾಗ್ರಹಿಗಳನ್ನು ಚದುರಿಸಲು ಪೋಲೀಸರು ಗೋಲಿಬಾರ್ ನಡೆಸಿದರು. ಈ ದುರ್ಘಟನೆಯಿಂದ ಕಾಂಗ್ರೆಸ್ ಸರ್ಕಾರದ ವಿರುದ್ಧ ಜನತೆ ಮತ್ತಷ್ಟು ಕೋಪಗೊಂಡರು. ತುಂಗಭದ್ರಾ ಅಚ್ಚುಕಟ್ಟಿನ ಪ್ರದೇಶದ ರೈತರೂ ಸಹ ಹೋರಾಟಕ್ಕಿಳಿದರು. ರೈತರು ನೀರಾವರಿ ಕರ ಕೊಡದೆ ಪ್ರತಿಭಟಿಸಿದರು. ಮುಂದೆ ಹಂಪೆಯಲ್ಲಿ ಅಖಿಲ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತು ಬೃಹತ್ ಸಮಾವೇಶ ನಡೆಯಲು ಚಿಂತಿಸಿತು. ಆಂಧ್ರಕ್ಕೆ ಸೇರಿಸಲ್ಪಟ್ಟ ಕನ್ನಡನಾಡಿನ ಬಳ್ಳಾರಿ ಜಿಲ್ಲೆಯ ತಾಲ್ಲೂಕುಗಳಾದ ಸಿರಗುಪ್ಪ, ಬಳ್ಳಾರಿ, ಹೊಸಪೇಟೆ, ಮಲ್ಲಾಪುರಗಳನ್ನು ಪುನಃ ಪಡೆಯುವ ಉದ್ದೇಶ ಈ ಸಮಾವೇಶದ್ದು. ಸುಮಾರು ೧೦ಸಾವಿರಕ್ಕೂ ಅಧಿಕ ಕನ್ನಡಾಭಿಮಾನಿಗಳು ಈ ಸಮಾವೇಶದಲ್ಲಿ ಭಾಗಿಗಳಾದರು. ಕೆ.ಆರ್. ಕಾರಂತರ ಅಧ್ಯಕ್ಷತೆಯಲ್ಲಿ ನಡೆದ ಸಮಾವೇಶವನ್ನು ಕೇರಳ ಕಾಂಗ್ರೆಸ್‌ನ ಧುರೀಣರಾದ ಕೃಷ್ಣಮೆನನ್‌ರವರಿಂದ ಉದ್ಘಾಟಿಸಲ್ಪಟ್ಟಿತು. ಯಾವುದೇ ಕಾರಣಕ್ಕೂ ಬಳ್ಳಾರಿಯನ್ನು ಆಂಧ್ರಕ್ಕೆ ನೀಡಲಾರವೆಂಬ ಹಾಗೂ ಯಾವುದೇ ಪ್ರಸಂಗದಲ್ಲಿಯಾದರೂ ಪ್ರಾಣಬಿಟ್ಟೇವು ಆದರೆ ಬಳ್ಳಾರಿಯನ್ನು ಆಂಧ್ರಕ್ಕೆ ನೀಡಲಾರೆವು ಎಂಬ ಅಭಿಮತ ಸಮಸ್ತ ಕನ್ನಡಿಗರದಾಗಿತ್ತು.

ಮುಂದೆ ಕಾಂಗ್ರೆಸ್‌ನೊಂದಿಗೆ ಅಸಹಕಾರ ಮುಂದುವರೆದಂತೆ ಧಾರವಾಡದ ವಿಧಾನಸಭೆ ಉಪಚುನಾವಣೆಯಲ್ಲಿ ಕಾಂಗ್ರೆಸ್ ಅಭ್ಯರ್ಥಿಯ ವಿರುದ್ಧ ಶ್ರೀ ಹಂಗರಕಿ ಅವರನ್ನು, ಹುಬ್ಬಳ್ಳಿಯಲ್ಲಿ ಶ್ರೀ ಕಾಂಬ್ಳೆಯವರನ್ನು, ರೋಣದಲ್ಲಿ ಶ್ರೀ ಪೂಜಾರ್‌ರವರನ್ನು, ಕರ್ನಾಟಕ ಏಕೀಕರಣದ ಅಭ್ಯರ್ಥಿಯನ್ನಾಗಿ ನಿಲ್ಲಿಸಲಾಯಿತು. ಈ ಮೂರು ಉಪಚುನಾವಣೆಯಲ್ಲಿಯೂ ಕರ್ನಾಟಕದ ಏಕೀಕರಣದ ಅಭ್ಯರ್ಥಿಗಳೇ ಗೆಲುವು ಸಾಧಿಸಿ ನಗರಸಭಾ ಅಧ್ಯಕ್ಷರಾದರು. ಇದು ಕಾಂಗ್ರೆಸ್ ಪಕ್ಷಕ್ಕೆ ನುಂಗಲಾರದ ತುತ್ತಾಯಿತು. ಅದೇ ರೀತಿ ಬಳ್ಳಾರಿ ನಗರಸಭಾ ಚುನಾವಣೆಯಲ್ಲಿಯಂತೂ ಕರ್ನಾಟಕ ಏಕೀಕರಣದ ಅಭ್ಯರ್ಥಿಯೇ ಗೆಲುವು ಸಾಧಿಸಿ ನಗರಸಭಾ ಅಧ್ಯಕ್ಷರಾದರು. ಈ ಎಲ್ಲಾ ಬೆಳವಣಿಗೆಗಳಿಂದ ಜಾಗೃತವಾದ ಕಾಂಗ್ರೆಸ್ ಸರ್ಕಾರ ಕನ್ನಡದ ಮೈಸೂರು ರಾಜ್ಯ ಪ್ರಾಂತ್ಯ ರಚನೆಯ ಅಧಿಕೃತ ಆದೇಶ ಹೊರಡಿಸಿತು. ಅಕ್ಟೋಬರ್ ೧೦, ೧೯೫೫ರಂದು ರಾಜ್ಯದ ಗಡಿಭಾಗಗಳನ್ನು ನಿರ್ಧರಿಸಿ, ಸುಮಾರು ೧೬ ರಾಜ್ಯ ಹಾಗೂ ೩ ಕೇಂದ್ರಾಡಳಿತ ಪ್ರದೇಶಗಳನ್ನು ಸೂಚಿಸುವ ಫಜಲ್‌ಆಲಿ ಆಯೋಗ ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು. ಈ ವರದಿ ಯಲ್ಲಿಯೂ ಸಹ ಬಳ್ಳಾರಿ ಜಿಲ್ಲೆಯ ಪ್ರದೇಶಗಳು ಕನ್ನಡದ ಮೈಸೂರ ರಾಜ್ಯ ಪ್ರಾಂತ್ಯದೊಳಗೆ ಸೇರಿರಲಿಲ್ಲ. ನವೆಂಬರ್ ೧, ೧೯೫೬ ರಂದು ಮೈಸೂರು ರಾಜ್ಯ ಉದಯವಾಯಿತು.

ಬಳ್ಳಾರಿ ಕುರಿತ ಅನ್ಯಾಯವನ್ನು ಪ್ರತಿಭಟಿಸಿ ಬಳ್ಳಾರಿಯಲ್ಲಿ ಬೃಹತ್ ರ್ಯಾಲಿ ಮತ್ತು ಚಳುವಳಿಗಳು ನಡೆದವು. ಸುಮಾರು ೫೦ ಸಾವಿರ ಜನರು ಈ ಸಭೆಗಳಲ್ಲಿ ಭಾಗವಹಿಸಿದ್ದೊಂದು ಇತಿಹಾಸ. ಈ ಸಭೆಯಲ್ಲಿ ಮುರಗೋಡ ಮಹಾದೇವರು ಮಾತನಾಡುತ್ತಾ, ***'ಬಳ್ಳಾರಿ ಜಿಲ್ಲೆ ಕರ್ನಾಟಕಕ್ಕೆ ಸೇರಿದ ಸ್ಥಳವೆಂದು ಕೇಂದ್ರ ಸರ್ಕಾರ ತಕ್ಷಣವೇ ಅಧಿಕೃತ ಆದೇಶ ಹೊರಡಿಸಬೇಕು ಇಲ್ಲವಾದರೆ ತುಂಗಭದ್ರಾ ನದಿಗೆ ಕಟ್ಟಲಾದ ಅಣೆಕಟ್ಟನ್ನು ಧ್ವಂಸ ಮಾಡಿ, ತುಂಗಾ ನದಿಯ ಒಂದು ಹನಿ ನೀರನ್ನು ಆಂಧ್ರಕ್ಕೆ ಸಿಗದಂತೆ ಮಾಡುತ್ತೇವೆ'*** ಎಂದು ಗರ್ಜಿಸಿದರು. ಅದರಂತೆ ದಿನನಿತ್ಯ ವಿವಿಧರೀತಿಯ ಪ್ರತಿಭಟನೆಗಳು ನಡೆದವು. ದಿನಕಳೆದಂತೆ ಸ್ವರೂಪ ಹಿಂಸಾ ರೂಪಕ್ಕೆ ಜಾರತೊಡಗಿತು. ಅಸಂಖ್ಯಾತ ಕನ್ನಡಾಭಿಮಾನಿಗಳು ಬಂಧನಕ್ಕೊಳಗಾದರು. ಅಂದಿನ ಗೃಹಮಂತ್ರಿಗಳಾಗಿದ್ದ ಸರ್ದಾರ್ ವಲ್ಲಭಬಾಯಿ ಪಟೇಲರು, ಅಳವಂಡಿ ಶಿವಮೂರ್ತಿಸ್ವಾಮಿಗಳಿಗೆ ಒಂದು ಸಂದೇಶದ ಮೂಲಕ ಸತ್ಯಾಗ್ರಹ ನಿಲ್ಲಿಸಲು ವಿನಂತಿಸಿಕೊಂಡರು. ಬೇಡಿಕೆಗೆ ಕೇಂದ್ರ ಸಹಕರಿಸಲಿದೆ ಎಂದು ಭರವಸೆ ನೀಡಿದರು. ಗೃಹಮಂತ್ರಿಗಳ ಮನವಿಗೆ ಸಹಕರಿಸಿದ ಶಿವಮೂರ್ತಿಸ್ವಾಮಿಗಳು ತಾತ್ಕಾಲಿಕವಾಗಿ ಸತ್ಯಾಗ್ರಹ ಹಿಂಪಡೆದು ದೆಹಲಿಗೆ ಹೋದರು. ಆ ಸಂದರ್ಭದಲ್ಲಿ ಅವರ ಜೊತೆಯಲ್ಲಿ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಕೆಂಗಲ್ ಹನುಮಂತಯ್ಯ ಸಹ ಇದ್ದರು. ದೀರ್ಘ ಸಮಾಲೋಚನೆಯ ನಂತರ ಒಂದು ನಿರ್ಣಯದ ಆದೇಶ ಹೊರಡಿಸಿದರು.

ಅದರಲ್ಲಿ ಬಳ್ಳಾರಿ ಜಿಲ್ಲೆ ಮೈಸೂರು ರಾಜ್ಯಕ್ಕೆ ಒಳಪಟ್ಟಿತ್ತು. ಇದೊಂದು ಕನ್ನಡ ಜನತೆಯ ಐತಿಹಾಸಿಕ ಹೋರಾಟದ ಗೆಲುವು ಎನ್ನಬಹುದು. ಅಸಂಖ್ಯಾತ ಕನ್ನಡ ಜನತೆಯ ನಿರಂತರ ಶ್ರಮದಿಂದ ಇದು ಸಾಧ್ಯವಾಯಿತು.

ಮುಂದೆ ಮೈಸೂರು ರಾಜ್ಯ ಹಳೇ ಮೈಸೂರು ಸಂಸ್ಥಾನವನ್ನು ಮಾತ್ರ ಪ್ರತಿಬಿಂಬಿಸುತ್ತಿದ್ದ ಕಾರಣ ಸಮಸ್ತ ಕರ್ನಾಟಕದ ಭೂವ್ಯಾಪ್ತಿಯ ಪ್ರದೇಶವನ್ನು ಪ್ರತಿಬಿಂಬಿಸುತ್ತಿದ್ದ *'ಕರ್ನಾಟಕ'* ಎಂಬ ಹೆಸರೇ ಅತ್ಯಂತ ಸೂಕ್ತವೆಂಬ ಆಶಯ ಎಲ್ಲಾ ಕನ್ನಡಿಗರದಾಗಿತ್ತು. ರಾಜ್ಯದ ಹೆಸರು ಕರ್ನಾಟಕ ಎಂದು ಬದಲಾಗಬೇಕೆಂಬ ಪ್ರಬಲವಾದ ಒತ್ತಡಗಳೂ ಸಹ ರಾಜ್ಯ ಸರ್ಕಾರದ ಮೇಲೆ ಬರಲಾರಂಭಿಸಿದವು. ಹುಬ್ಬಳ್ಳಿ-ಧಾರವಾಡ-ಬಿಜಾಪುರ ಹಾಗೂ ಬೆಳಗಾವಿ ಮುಂತಾದ ಕಡೆಯಿಂದ ನೂರಾರು ಕನ್ನಡಾಭಿಮಾನಿಗಳು ರಾಜ್ಯದ ಹೆಸರು ಕರ್ನಾಟಕವಾಗಬೇಕೆಂಬ ಘೋಷಣೆಯೊಂದಿಗೆ ವಿಧಾನ ಸೌಧಕ್ಕೆ ಮುತ್ತಿಗೆ ಹಾಕುವ ಪ್ರಯತ್ನ ನಡೆಸಿದರು. ರಾಜ್ಯ ಸರ್ಕಾರ ಅವರೆಲ್ಲರನ್ನೂ ನಿರ್ದಯವಾಗಿ ಶಿಕ್ಷಿಸಿತು. ಶಾಂತವೇರಿ ಗೋಪಾಲಗೌಡರು ಹಾಗೂ ಮುರಗೋಡ ಮಹಾದೇವರು ಈ ಹೋರಾಟಕ್ಕೆ ಬೆಂಬಲವಾಗಿ ನಿಂತಿದ್ದರು. ಆಗ ರಾಜ್ಯದ ಮುಖ್ಯಮಂತ್ರಿಗಳಾಗಿದ್ದವರು ಬಿ.ಡಿ. ಜತ್ತಿರವರು. ಕನ್ನಡಾಭಿಮಾನಿಗಳ ಅವಿರತ ಶ್ರಮ ಹಾಗೂ ಸಂಕಲ್ಪ ಶಕ್ತಿಯಿಂದ ಅಂದರೆ ಮೈಸೂರು ರಾಜ್ಯ ಸ್ಥಾಪನೆಗೊಂಡು ಸುಮಾರು ೧೭ ವರ್ಷಗಳ ನಂತರ ನಮ್ಮ ರಾಜ್ಯದ ಹೆಸರು *'ಕರ್ನಾಟಕ'* ಎಂಬ ಅಭಿದಾನ ಪಡೆದು ಸಂಭ್ರಮಿಸಿತು. ಹೀಗೆ ಸಾಗಿ ಬಂದ ಕರ್ನಾಟಕ ಏಕೀಕರಣ ಹೋರಾಟದ ನೆನಪು ನಮ್ಮೊಳಗೆ ಸದಾ ಕನ್ನಡಾಭಿಮಾನವನ್ನು ಜಾಗೃತಿಸುತ್ತದೆ. ಕನ್ನಡ ನಾಡು ನುಡಿಯ ರಕ್ಷಣೆ ಹಾಗೂ ಉಳಿವಿಗಾಗಿ ನಡೆದ ಕರ್ನಾಟಕ ಏಕೀಕರಣದಂತಹ ಹೋರಾಟಗಳು ಸಾವಿರಾರು. ಆದರೆ ನಾವುಗಳು ಅದೆಲ್ಲವನ್ನೂ ಮರೆತಿದ್ದೇವೆ.

*'ಕಾವೇರಿಂ ಗೋದಾವರಿವರೆಗೆ ಮೆರೆದಿರ್ಪ ನಾಡಿದು'* ಎಂದು ಕವಿರಾಜಮಾರ್ಗದ ಕರ್ತೃ ತಿಳಿಸುವಂತೆ ನಮ್ಮ ಕನ್ನಡ ನಾಡಿನ ವ್ಯಾಪ್ತಿ ಅತ್ಯಂತ ವಿಶಾಲವಾದದ್ದು. ನಮ್ಮ ಕನ್ನಡ ಭಾಷೆಗೆ ಸಾವಿರಾರು ವರ್ಷಗಳ ಭವ್ಯವಾದ ಇತಿಹಾಸ ಮತ್ತು ಪರಂಪರೆಯಿದೆ. ಸಾಹಿತ್ಯಿಕವಾಗಿ ಹಾಗೂ ಶಾಸ್ತ್ರೀಯವಾಗಿ ಸಮೃದ್ಧವಾದ ಶಬ್ಧ ಸಂಪತ್ತುಳ್ಳ ಪ್ರಾಚೀನ ಭಾಷೆ ನಮ್ಮ ಕನ್ನಡ ಎಂಬುವುದರಲ್ಲಿ ಎರಡು ಮಾತಿಲ್ಲ. ಕ್ರಿ.ಪೂ. ೩೨೦-೨೦೦ರ ಸುಮಾರಿನಲ್ಲಿಯೇ 'ಕರ್ನಾಟ' ಎಂಬ ಪದ ಪ್ರಯೋಗವಾದುದ್ದನ್ನು ನಾವು ಕಾಣುತ್ತೇವೆ. ವ್ಯಾಸ ಭಾರತದಲ್ಲಿ ಶೂದ್ರಕನ 'ಮೃಚ್ಛಕಟಿಕ'ದಲ್ಲಿ ಮಾರ್ಕಂಡೇಯ ಪುರಾಣ ಹಾಗೂ ಸೋಮದೇವನ ಕಥಾ ಸರಿತ್ಸಾಗರದಲ್ಲೆಲ್ಲಾ ಈ ಉಲ್ಲೇಖಗಳು ನಮಗೆ ಕಾಣಸಿಗುತ್ತವೆ. ೧೨ನೇ ಶತಮಾನದಲ್ಲಿ ಬಸವಾದಿ ಶರಣರು ನೀಡಿದ ವಚನ ಸಾಹಿತ್ಯ ನಮ್ಮ ಕನ್ನಡ ಭಾಷೆಯನ್ನು ಮತ್ತಷ್ಟು ಶ್ರೀಮಂತಗೊಳಿಸಿದ್ದಲ್ಲದೇ ಅದು ವಿಶ್ವದ ಗಮನ ಸೆಳೆದಿದೆ. ಶ್ರೀಗಂಧದ ತಂಪಿನಂತೆ ನಮ್ಮ ಕನ್ನಡ ಭಾಷೆ ತನ್ನ ಸಂಸ್ಕೃತಿಯ ಹಿನ್ನಲೆಯ ಸೊಗಡಿನ ತಂಪನ್ನು ಸದಾ ವಿಶ್ವಕ್ಕೆ ನೀಡುತ್ತಾ ಬಂದಿರುವುದೊಂದು ಗಮನಾರ್ಹವಾದುದು.

ಕನ್ನಡ ರಾಜ್ಯೋತ್ಸವದ ಸಂದರ್ಭದಲ್ಲಿ ಯಾವುದೋ ಒಂದೆರೆಡು ಸಿನಿಮಾ ಹಾಡುಗಳನ್ನು ಹಾಡುವುದರ ಮೂಲಕ ರಾಜ್ಯೋತ್ಸವದ ಸಾರ್ಥಕತೆ ಕಾಣಲು ಸಾಧ್ಯವಿಲ್ಲ. ಕನ್ನಡ ಸಂಸ್ಕೃತಿಯ ನಿಜ ತಿರುಳು ನಮ್ಮ ರಕ್ತದಲ್ಲಿ ಒಂದಾಗಬೇಕು. ಕನ್ನಡಾಭಿಮಾನ ಮನದಲ್ಲಿ ಸದಾ ಹಸಿರಾಗಿರಬೇಕು. ಕನ್ನಡಿಗರಾದ ನಾವು ನಮ್ಮ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣವನ್ನಾದರೂ ಮಾತೃಭಾಷೆಯಲ್ಲೇ ಕೊಡಿಸುವ ಪ್ರಾಮಾಣಿಕ ಪ್ರಯತ್ನ ಮಾಡಬೇಕು. ಕನ್ನಡದಲ್ಲಿಯೇ ನಾಮಫಲಕಗಳನ್ನು ಹಾಕಿ ಎಂಬ ಹೋರಾಟ ಮಾಡುವ ಮಟ್ಟಿಗೆ ನಾವುಗಳು ಅಭಿಮಾನ ಶೂನ್ಯರಾಗಬಾರದು. ನಮ್ಮ ಭಾಷಾಭಿಮಾನವು ಅಂಧಾಭಿಮಾನವಾಗದಂತೆ ಸದಾ ನೋಡಿಕೊಳ್ಳಬೇಕು. ಸರ್ಕಾರ ಕನ್ನಡಪರ ಚಿಂತನೆಗೆ ಹೆಚ್ಚಿನ ಆದ್ಯತೆ ನೀಡಬೇಕು. ಕನ್ನಡಾಭಿವೃದ್ಧಿ ಪ್ರಾಧಿಕಾರ ಮತ್ತು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳು ಜೀವಂತ ಸ್ವರೂಪ ಪಡೆಯಬೇಕಾದುದು ಅತ್ಯಂತ ಅನಿವಾರ್ಯ ಹಾಗೂ ಅವಶ್ಯಕವಾದುದು. ಆಡಳಿತ ಭಾಷೆಯಾಗಿಯೇ ಕನ್ನಡ ಎಂದು ಸರ್ಕಾರ ಘೋಷಣೆ ಮಾಡಿದರೂ, ಅದಿನ್ನೂ ಪರಿಪೂರ್ಣವಾಗಿ ಜಾರಿಯಾಗಿಲ್ಲ. ಕನ್ನಡ ಭಾಷೆಯ ಅಳಿವು-ಉಳಿವು ಪ್ರತಿಯೊಬ್ಬ ಕನ್ನಡಿಗರ ಮೇಲಿದೆ. ನಮ್ಮ ಸಬಲವಾದ ಸಂಕಲ್ಪ ಶಕ್ತಿಯಿಂದ ಮಾತ್ರ ನಮ್ಮ ಭಾಷೆ ಸಮೃದ್ಧವಾಗಲು ಸಾಧ್ಯ. ರಾಜ್ಯೋತ್ಸವದ ಆಚರಣೆಯು ನಮ್ಮೊಳಗೆ ಕನ್ನಡ ಭಾಷೆಯ ಸಂಸ್ಕೃತಿಯ ಅನಾವರಣಕ್ಕೆ ಸಹಕಾರಿಯಾಗಬೇಕು. ರಾಜ್ಯೋತ್ಸವ ನಮ್ಮ ಸಂಸ್ಕೃತಿ-ಪರಂಪರೆಯ ಜಾಗೃತಿ ಹಾಗೂ ವಿಕಸನಕ್ಕೆ ಸಕಾರಣವಾಗಬೇಕು. ಆ ದಿಕ್ಕಿನಲ್ಲಿ ನಾವು ಆಚರಿಸುವ ರಾಜ್ಯೋತ್ಸವ ಮಾತ್ರ ಅರ್ಥಪೂರ್ಣ ಎನಿಸಿಕೊಳ್ಳಲು ಸಾಧ್ಯ. □





## ಗೋವೊಂದಿದ್ದರೆ ಮನೆಯೇ ಧನ್ವಂತರಿ

-ಲಲಿತಾ ನಟೇಶ್ *

ಭಾರತೀಯರು ಅನಾದಿ ಕಾಲದಿಂದಲೂ ಪ್ರಕೃತಿಯಲ್ಲಿರುವ ಪ್ರತಿಯೊಂದು ವಸ್ತುಗಳಲ್ಲಿಯೂ, ಜೀವಿಗಳಲ್ಲಿ ದೈವತ್ವವನ್ನು ಕಾಣುತ್ತಾ ಪೂಜಿಸಿಕೊಂಡು ಬರುತ್ತಿದ್ದಾರೆ. ಅವುಗಳಲ್ಲಿ ಮುಖ್ಯವಾಗಿ ಹಿಂದೂಗಳಿಗೆ ಆರಾಧ್ಯ ದೈವವಾದದ್ದು ಗೋವು ! ಏಕೆಂದರೆ ಇದು ಕೇಳಿದ್ದನ್ನೆಲ್ಲಾ ಕೊಡುವ ಕಾಮಧೇನು ಎಂದು ಬಲವಾಗಿ ನಂಬಿದ್ದಾರೆ. ಈ ಮಾತು ಅಕ್ಷರಶಃ ಸತ್ಯ. ನಮ್ಮ ದೇಶ ಕೃಷಿ ಪ್ರಧಾನ ದೇಶವಾಗಿರುವುದರಿಂದ ಹೊಲದಲ್ಲಿ ದುಡಿಮೆ ಮಾಡುವುದಕ್ಕೆ ಉತ್ತಮ ದೇಹಾರೋಗ್ಯ ಮುಖ್ಯ. ಅದು ಹಾಲಿನಿಂದ ಸಿಗುತ್ತದೆ. ಉತ್ತಮ ಗೊಬ್ಬರ, ಗಂಜಲಗಳು ಭೂಮಿಯ ಫಲವತ್ತತೆಗೂ, ಕೀಟನಾಶಕವಾಗಿಯೂ ಬಳಕೆಯಾಗುತ್ತಿರುವುದರಿಂದ ಗೋವು 'ಆರೋಗ್ಯಕರ ಸಮಾಜದ ಅಡಿಪಾಯವೇ ಆಗಿದೆ. ರೈತನ ಮಿತ್ರನಾಗಿ, ಗೆಳೆಯನಾಗಿ, ಬಂಧುವಾಗಿ ಕಷ್ಟ, ಸುಖಗಳಲ್ಲಿ ಭಾಗಿಯಾಗಿ ಸಹಕರಿಸುವುದರಿಂದ 'ಗೋವು ರೈತನ ಮನೆಯ ದೀಪಗಳಂತೆ' ಎಂದರೆ ತಪ್ಪಾಗಲಾರದು. 'ಪರೋಪಕಾರಕ್ಕೆ ಅಪ್ಪಟವಾದ ಇನ್ನೊಂದು ಹೆಸರೇ ಗೋವು' .

ಗೋವು ಎಂಬ ಪದವೇ ಅನೇಕ ಅದ್ಭುತ ಶಕ್ತಿಗಳ ಭಂಡಾರ, ಶಾಂತಿ ಸಹಬಾಳ್ವೆಗೆ ಪ್ರತೀಕವಾಗಿದೆ. ತಾಯಿ ಮಮತೆಯನ್ನು ಕೊಡಲು ದೇವಲೋಕದಿಂದ ಅಮೃತ ಕಲಶಗಳನ್ನು ಹೊತ್ತು ಜಗವ ಪೊರೆಯಲು ಬಂದಿರುವ ಲೋಕಕಲ್ಯಾಣಿ. ಮಾನವ ಕುಲದ ಏಳಿಗೆಗಾಗಿ ಜನ್ಮತಾಳಿ ನಿಸ್ವಾರ್ಥಸೇವೆ ಸಲ್ಲಿಸುತ್ತಿರುವ ಸದ್ಗುಣಿ. ಹಿಂದೂಗಳು ತಾವು ಆಚರಿಸುವ ಪ್ರತಿಯೊಂದು ಶುಭಕಾರ್ಯಕ್ರಮಗಳಲ್ಲಿ ಗೋವಿಗೆ ಉತ್ತುಂಗ ಸ್ಥಾನವನ್ನೇ ಕಲ್ಪಿಸಿಕೊಟ್ಟಿದ್ದಾರೆ ಮತ್ತು ದೇಹದ ಪ್ರತಿಯೊಂದು ಭಾಗಗಳಲ್ಲಿಯೂ ದೇವಾನುದೇವತೆಗಳು ವಾಸಿಸುತ್ತಿದ್ದಾರೆಂಬ ಭಾವನೆಯಿಂದ ಪ್ರತಿದಿನ ಪೂಜಿಸಿ ನಮಸ್ಕರಿಸುವುದರಿಂದ ಕೋಟಿ ಪುಣ್ಯ ಬರುತ್ತದೆಂಬ ನಂಬಿಕೆ. ಇಂಥ ಒಂದು ನಂಬಿಕೆಗೆ ಪುಣ್ಯಕೋಟಿ ಗೋವಿನ ಹಾಡು ಈ ನಾಡಿನ ತುಂಬ ಜನಜನಿತವಾಗಿರುವುದೇ ಕಾರಣ. 'ಹಸು ಇದ್ದೊಡೆ ಕಸುವ ಕಸುವಿದ್ದೊಡೆ ಕಾಯಕದಂತೆ ಗೋವಿನ ಮೇಲೆ ಅನೇಕ ಗಾದೆಗಳನ್ನು ಕಟ್ಟಿ ಹೇಳಿರುವುದನ್ನು ನೋಡಿದರೆ ಇದರ ಮಹತ್ವ ಏನೆಂಬುದು ಅರಿವಾಗುತ್ತದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ 'ಎತ್ತುಗಳಿಲ್ಲದವನಿಗೆ ಹಿರಿತನವಿಲ್ಲ, 'ಕಸವಿರುವ ಮನೆಯಲ್ಲಿ ಬಸವಣ್ಣ, ಇವು ಎಷ್ಟು ಚೆನ್ನಾಗಿವೆ ಅಲ್ಲವೆ? ಹಿಂದೆ ನಮ್ಮ ಮನೆಗಳು ಅವಿಭಕ್ತ ಕುಟುಂಬಗಳಾಗಿದ್ದವು. ಮನೆಯ ತುಂಬಾ ಜನಗಳಿದ್ದರು. ದವಸ ಧಾನ್ಯಗಳಿಂದ ತುಂಬಿರುತ್ತಿದ್ದವು. ಕೊಟ್ಟಿಗೆಯ ತುಂಬಾ ದನಕರುಗಳು ಅವುಗಳ ಕೊರಳಿಗೆ ಕಟ್ಟಿದ್ದ ಗೆಜ್ಜೆಯ ನಿನಾದ, ಅಂಬಾ ಎನ್ನುವ ಆತ್ಮೀಯವಾದ ಮಧುರ ಧ್ವನಿ ಮತ್ತು ಹಾಲು, ಮೊಸರು ತುಪ್ಪದ ಹೊಳೆಯೇ ಹರಿಯುತ್ತಿದ್ದವು. ಸಂಬಂಧಗಳಲ್ಲಿ ಆತ್ಮೀಯತೆಯೇ ತುಂಬಿ ತುಳುಕುತ್ತಿತ್ತು. ಹಬ್ಬ ಹರಿದಿನಗಳು ಸಡಗರ ಸಂಭ್ರಮದಿಂದ ಕೂಡಿರುತ್ತಿದ್ದವು. ವಿಘ್ನಗಳ ನಿವಾರಣೆಗಾಗಿ ಇಂದಿಗೂ ದೋಷ ಪರಿಹಾರಕ್ಕಾಗಿ ದೇಶೀಯ ಹಸುಗಳ ತಳಿಗಳ ಹಾಲು, ಗೋಮಯವನ್ನು ಬಳಸುವುದರಿಂದ ಅನೇಕ ಭಯಂಕರ ಕಾಯಿಲೆಗಳನ್ನು ಗುಣಪಡಿಸಬಹುದೆಂಬುದನ್ನು ಭಾರತೀಯ ಆಯುರ್ವೇದ ವೈದ್ಯ ಪದ್ಧತಿಯಿಂದ ತಿಳಿದಿದ್ದೇವೆ. 'ವಿಭೂತಿ ಧರಿಸಿ ಕೈಲಾಸ ಕಾಣು', 'ಗೋಮವ ಕುಡಿದು ಮೃತ್ಯುಂಜಯನಾಗು' ಎಂಬ ನುಡಿಗಟ್ಟು ಮೇಲುನೋಟಕ್ಕೆ ಧಾರ್ಮಿಕ ನಂಬಿಕೆಗಳಂತೆ ಕಂಡರೂ, ವೈಜ್ಞಾನಿಕವಾಗಿ ವಿಭೂತಿ ಧರಿಸುವುದರಿಂದ ಮತ್ತು ಗೋಮವನ್ನು ಕುಡಿಯುವುದರಿಂದ ಅನೇಕ ಕಾಯಿಲೆಗಳನ್ನು ಗುಣಪಡಿಸುವ ಶಕ್ತಿ ಇದೆ ಎಂಬುದನ್ನು ಸಾದರಪಡಿಸಿದ್ದಾರೆ. 'ಗೋವೊಂದಿದ್ದರೆ ಮನೆಯೇ ಧನ್ವಂತರಿ ಇದ್ದಂತೆ, ಅನ್ನದಾತೆ, ಪಾಪನಾಶಿನಿ, ಅಮೃತಮಯಿ, ಸೌಂದರ್ಯವರ್ಧಿನಿ ಎಂದು ಗುರುತಿಸಿಕೊಂಡಿದ್ದಾಳೆ. ಹುಟ್ಟಿನಿಂದ ಸಾಯುವವರೆಗೂ ಗೋವು ಮತ್ತು ಮಾನವನ ಸಂಪರ್ಕ ಬಿಡಿಸಲಾಗದ

* ಚೌಳಹಿರಿಯೂರು ಮತ್ತು ಅಂಚೆ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

ಬಂಧವಾಗಿ ಬೆಸೆದುಕೊಂಡು ಬರುತ್ತಿದೆ. ಹೋಮಗಳಿಗೆ ಮುಖ್ಯವಾಗಿ ಬೇಕಾಗಿರುವ ಪದಾರ್ಥಗಳೆಂದರೆ ನಾಟಿ ಹಸುವಿನ ಸಗಣಿ, ತುಪ್ಪ, ಕರ್ಪೂರದ ಜೊತೆ ಮೃತ್ಯುಂಜಯ ಮಂತ್ರ ಜಪಿಸುತ್ತಾ ಸುಡುವುದರಿಂದ ಕಷ್ಟಗಳ ನಿವಾರಣೆಯಾಗಿ ಗಿಡಮರ, ಫಸಲುಗಳಿಗೆ ಅಂಟಿ ಕೊಂಡಿರುವ ಕ್ರಿಮಿಕೀಟಗಳನ್ನು ನಿವಾರಿಸುವ ಶಕ್ತಿ ಇರುವುದರಿಂದ ಹೋಮವನ್ನು ಮಾಡುತ್ತಾರೆ. 'ಗೋವನ್ನು ಪೂಜಿಸುತ್ತಾ, ಕರ್ಮವ ಕಳಕೊಂಡೆ' ಎಂಬುದು ಹೋಮದ ಮಹತ್ವ ತಿಳಿಸುತ್ತದೆ, ಪ್ರತ್ಯಕ್ಷ ಸಾಕ್ಷಿಯಾಗುತ್ತಲೂ ಇದೆ.

ಮೊದಲು ಮನೆಗಳಲ್ಲಿ ಗೋವುಗಳಿಂದ ತುಂಬಿದ್ದ ಸಂದರ್ಭದಲ್ಲಿ ಆ ಮನೆಯ ದೊಡ್ಡ ಹಸುವಿಗೆ ವಿಶೇಷ ಸ್ಥಾನಮಾನವನ್ನು ಕೊಡುತ್ತಿದ್ದರು. ಆ ಗೋವು ಸಂತಾನ ಲಕ್ಷ್ಮಿಯಾಗಿತ್ತು. ಮಹಾಮಾತೆಯಾಗಿತ್ತು. ಮನೆಮಂದಿಯೆಲ್ಲ ಅದರ ಗುಣಗಾನವನ್ನು ಮಾಡುತ್ತಿದ್ದರು. 'ನಮ್ಮನೆ ದೊಡ್ಡ ಹಸುವಿಗೆ ನೂರಾರು ಬಳಗ. ಇದರ ಮಕ್ಕಳು ಮೊಮ್ಮಕ್ಕಳನ್ನು ಮನೆಯ ಹೆಣ್ಣು ಮಕ್ಕಳು ಬಾಣಂತನ ಮುಗಿಸಿಕೊಂಡು ಗಂಡನ ಮನೆಗೆ ಕಳಿಸಿ ಕೊಡುವಾಗ ಗೋವುಗಳನ್ನು ಬಳುವಳಿಯಾಗಿ ಕೊಡುತ್ತಿದ್ದರು. ಇತ್ತಿತ್ತಲಾಗಿ ಈ ಪದ್ಧತಿ ಕಡಿಮೆಯಾಗುತ್ತಿದೆ.

***'ಸಗಣಿಯು ಉರಿಸಿದರೆ ವನದೇವಿ ನಗುತ್ತಾಳೆ'*** ಈ ಸೂಕ್ತಿ ಸಗಣಿಯನ್ನು ಉರುವಲಾಗಿ ಬಳಸುವುದರಿಂದ ಕಾಡುಗಳನ್ನು ಅವಲಂಬಿಸುವುದು ಕಡಿಮೆಯಾಗುತ್ತದೆ. ಇದರಿಂದ ಗೊತ್ತಾಗುವುದೇನೆಂದರೆ 'ಗೋವೊಂದಿರುವ ಮನೆ ಬೆಲೆಬಾಳುವ ಆಭರಣವೊಂದಿರುವುದಕ್ಕಿಂತ ಹೆಚ್ಚು. ಇನ್ನೂ ನಮ್ಮ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಗೋವು ಹೇಗೆ ಬಳಕೆಯಾಗುತ್ತಿದೆ ಎಂಬುದನ್ನು ತಿಳಿಯೋಣ.

ಗ್ರಾಮದೇವರ ಹೆಸರಿನಲ್ಲಿ ದನಗಳ ಜಾತ್ರೆ ಹಿಂದಿನಿಂದಲೂ ಅದ್ದೂರಿಯಾಗಿ ನಡೆದುಕೊಂಡು ಬರುತ್ತಿದೆ. ಜಾನುವಾರುಗಳನ್ನು ಕೊಂಡುತೆಗೆದುಕೊಳ್ಳುವುದು. ಸಡಗರದ ಸಂಭ್ರಮದ ವಾತಾವರಣವನ್ನೇ ಉಂಟುಮಾಡುತ್ತದೆ. ಸಾವಿರಾರು ರಾಸುಗಳು ಬಂದಿರುತ್ತವೆ. ಅದೆಷ್ಟೋ ರೈತರು ಹೋರಿಗಳನ್ನು ಕಣ್ಮನ ಸೆಳೆಯುವಂತೆ ಪೋಷಣೆ ಮಾಡಿಕೊಂಡು ಬಂದಿರುತ್ತಾರೆ. ಕೆಲವು ಹೋರಿಗಳು ಲಕ್ಷ ಲಕ್ಷ ಬೆಲೆಯುಳ್ಳವುಗಳಾಗಿರುತ್ತವೆ.

ಒಕ್ಕಲುತನವು ಸದೃಢ ದನಕರುಗಳಿಂದ ಒಂದು ಕುಟುಂಬದ ಮತ್ತು ದೇಶದ ಅಭಿವೃದ್ಧಿ ಸಾಧ್ಯವಾಗಿರುವುದರಿಂದ ಎತ್ತುಗಳು ಮತ್ತು ಹಸುಗಳು ರೈತರ ಆರಾಧ್ಯದೈವಗಳಾಗಿರುವುದರಿಂದ ಸೋಮವಾರವನ್ನು ಬಸವಣ್ಣನ ವಾರವೆಂದು ಬಿಡುವಿಲ್ಲದೆ ದುಡಿದ ಎತ್ತುಗಳಿಗೆ ಒಂದು ದಿನ ರಜೆ ಮಾಡುತ್ತಾರೆ. ಸುಗ್ಗಿ ಹಬ್ಬ, ಜಾತ್ರೆಯ ಕಾರಹುಣ್ಣಿಮೆ ಮತ್ತು ಬಸವಜಯಂತಿಯ ದಿನದಂದು ಎತ್ತುಗಳನ್ನು ಸ್ನಾನ ಮಾಡಿಸಿ, ಕೊಂಬುಗಳಿಗೆ ಬಣ್ಣದಿಂದ ಅಲಂಕಾರ ಮಾಡಿ ಕೊರಳಿಗೆ ಘಂಟೆ ಸರವನ್ನು ಹಾಕಿ, ಮೈಮೇಲೆ ವಿವಿಧ ಕಸೂತಿಗಳನ್ನು ಮಾಡಿದ ವಸ್ತ್ರಗಳನ್ನು ಹೊದಿಸಿ ಊರಿನ ಬೀದಿ ಬೀದಿಗಳಲ್ಲಿ ಮೆರವಣಿಗೆ ಮಾಡುವ ಪದ್ಧತಿ ಇಂದಿಗೂ ರೂಢಿಯಲ್ಲಿದೆ. ಇದು ಜನಪದ ಆಚರಣೆಯ ಒಂದು ಭಾಗವೇ ಆಗಿದೆ.

ಮದುವೆ ಸಂದರ್ಭದಲ್ಲಿ ಗೋವು– ಧಾರೆ ಎರೆಯಲು ಗೋವಿನ ಹಾಲು ಬೇಕು. ವಧು–ವರರಿಂದ ಪ್ರಥಮವಾಗಿ ಗೋವಿನ ಪೂಜೆಯನ್ನು ಮಾಡಿಸುವ ವಾಡಿಕೆ ಇದೆ. ನವ ದಂಪತಿಗಳ ಮಿಲನ ಮಹೋತ್ಸವಕ್ಕೆ ಮೊದಲು ಹಾಲಿಗೆ ಸಕ್ಕರೆಯನ್ನು ಬೆರೆಸಿ ಹದವಾಗಿ ಕಾಯಿಸಿ ಸತಿಪತಿಗಳಿಬ್ಬರು ಹಂಚಿ ಕುಡಿಯುವುದರಿಂದ ದಾಂಪತ್ಯವೂ ಮಧುರವಾಗಿ ಬಾಳಿನ ಕೊನೆಯವರೆಗೂ ಹಾಲು ಸಕ್ಕರೆಯಂತೆ ಕಲೆತು ಇದರಿಂದ ಒಳ್ಳೆಯ ಮಕ್ಕಳು ಜನಿಸುತ್ತಾರೆ ಎಂಬ ನಂಬಿಕೆ ಇದೆ ಮತ್ತು ಒಂದೇ ಮನೆಗೆ ಮೂರು ಜನ ಅಕ್ಕತಂಗಿಯರನ್ನು ಒಂದೇ ಮನೆಯ ಅಣ್ಣ ತಮ್ಮಂದಿರಿಗೆ ಕೊಟ್ಟ ಸಂದರ್ಭದಲ್ಲಿ ಮೂರನೆಯ ಕನ್ಯೆಯನ್ನು ಮನೆ ತುಂಬಿಸಿಕೊಳ್ಳುವ ಮೊದಲು ಒಂದು ಕರೆಯುವ ಹಸು ಕರುವನ್ನು ಪೂಜಿಸಿ ಮನೆಯೊಳಗೆ ಬಿಟ್ಟ ನಂತರ ಕನ್ಯೆಯನ್ನು ಮನೆ ತುಂಬಿಸಿಕೊಳ್ಳುತ್ತಾರೆ.

**ಗೃಹ ನಿರ್ಮಾಣ ಮತ್ತು ಪ್ರವೇಶ ಸನ್ನಿವೇಶದಲ್ಲಿ ಗೋವು:**

ನೂತನವಾಗಿ ಗೃಹಗಳನ್ನು ಕಟ್ಟುವ ವೇಳೆ ಅಡಿಪಾಯ ತೆಗೆಯುವುದಕ್ಕೆ ಮುನ್ನ ಆ ಮನೆಗೆ ಶ್ರೇಯಸ್ಸು ಲಭಿಸಲೆಂದು ಭೂಮಿಗೂ ಮತ್ತು ಆಯುಧಗಳಿಗೂ ಹಾಲುತುಪ್ಪವನ್ನು ಬಿಟ್ಟು ನಂತರ ನಿರ್ಮಾಣ ಕೆಲಸ ಪ್ರಾರಂಭಿಸುತ್ತಾರೆ. ನಂತರ





ಗೃಹಪ್ರವೇಶದಲ್ಲಿಯೂ ಮೊದಲು ಮನೆಯೊಳಗೆ ಹಸುಕರುವನ್ನು ಬಿಡುತ್ತಾರೆ. ಹೊಸಮನೆಯಲ್ಲಿ ಮೊದಲು ಒಲೆಯ ಮೇಲೆ ಹಾಲು ಉಕ್ಕಿಸಿದ ನಂತರವೇ ಬೇರೆ ಅಡಿಗೆ ಮಾಡುವ ಸಂಪ್ರದಾಯ ಇಂದಿನ ಕಂಪ್ಯೂಟರ್ ಯುಗದಲ್ಲಿಯೂ ಸಮರ್ಪಕವಾಗಿ ನಡೆದುಕೊಂಡು ಬರುತ್ತಿದೆ.

ನಕ್ಷತ್ರ ದೋಷದಿಂದ ಮಗು ಜನಿಸಿದ ಸಂದರ್ಭದಲ್ಲಿ ದೋಷ ಪರಿಹಾರಕ್ಕಾಗಿ ಗೋಮಯವನ್ನು ಬಳಸುತ್ತಾರೆ. ಹಾಲು, ತುಪ್ಪವನ್ನು ಬಳಸುತ್ತಾರೆ. ಪುರೋಹಿತರಿಗೆ ಹಸು ಕರುವನ್ನು ದಾನ ಕೊಡುತ್ತಾರೆ. ಬಡವರಾಗಿದ್ದರೆ ಗೋವನ್ನು ಪೂಜಿಸಿ ಮಗುವನ್ನು ಅದರ ಹೊಟ್ಟೆಯ ಅಡಿಭಾಗದಿಂದ ಮೂರು ಬಾರಿ ನುಸುಳಿಸುತ್ತಾರೆ ಮತ್ತು ಹಸು ಕರುವಿನ ಮೂರ್ತಿಯನ್ನು ದಾನ ಕೊಡುತ್ತಾರೆ.

**ದೇವರಿಗೆ ಬಸವ ಅಥವಾ ಬಸವಿ ಬಿಡುವುದು :**

ಊರ ದೇವರಿಗೆ ತಮ್ಮ ಕಷ್ಟಗಳು ಪರಿಹಾರವಾದರೆ ನಮ್ಮ ಮನೆ ಹಸುವು ಹೋರಿ ಕರು ಹಾಕಿದರೆ ಬಸವ ಬಿಡುತ್ತೀವಿ, ಹೆಣ್ಣು ಕರು ಹಾಕಿದರೆ ಬಸವಿ ಬಿಡುತ್ತೀವಿ ಎಂದು ಹರಕೆ ಕಟ್ಟಿಕೊಂಡಿರುತ್ತಾರೆ. ಅದೇ ರೀತಿ ಮಾಡುತ್ತಾರೆ. ಇವು ಊರಿನಲ್ಲಿ ವಿಶೇಷ ಗೌರವಕ್ಕೆ ಪಾತ್ರವಾಗುತ್ತವೆ. ಯಾರ ಹೊಲದಲ್ಲಿ ಮೇಯುತ್ತಿದ್ದರೂ ಯಾರೂ ಹೊಡೆಯುವುದಿಲ್ಲ. ಎಲ್ಲರೂ ಪೂಜೆಯನ್ನು ಮಾಡಿ ಹಣ್ಣು ಹಂಪಲುಗಳನ್ನು ನೈವೇದ್ಯ ಮಾಡುತ್ತಾರೆ. ಆ ಗೋವು ಕರು ಹಾಕಿದರೆ ಅದು ಕರೆಯುವವರೆಗೂ ಒಬ್ಬರಿಗೆ ನಿಗದಿತ ಅವಧಿಯವರೆಗೆ ಹಣಕ್ಕೆ ಕೊಡುತ್ತಾರೆ. ಆ ಹಣವನ್ನು ದೇವರ ಹುಂಡಿಗೆ ಹಾಕಿ ದೇವರ ಕಾರ್ಯಕ್ರಮಗಳಿಗೆ ವಿನಿಯೋಗಿಸುತ್ತಾರೆ.

**ದೇವರ ಪೂಜಾ ಕಾರ್ಯಕ್ರಮಗಳು ಮತ್ತು ಪರಿಶುದ್ಧತೆಗಾಗಿ ಗೋವಿನ ಹಾಲು :**

ನಾಗಪೂಜೆ, ಹೋಮಗಳಲ್ಲಿ, ರುದ್ರಾಭಿಷೇಕಗಳಂತ ಮಂಗಳಕಾರ್ಯಕ್ರಮಗಳಲ್ಲಿ ಮನೆಯಲ್ಲಿ ಅಪವಿತ್ರವಾಗಿದ್ದರೆ ಅಂದರೆ ಸಾವು ಸಂಭವಿಸಿದ್ದರೆ, ಹೆಣ್ಣುಮಗಳು ಋತುಮತಿಯಾಗಿದ್ದರೆ, ಹೆರಿಗೆಯಾಗಿದ್ದರೆ, ಪುರೋಹಿತರು ಸಿಗದಿದ್ದ ಸನ್ನಿವೇಶಗಳಲ್ಲಿ ಗೋವಿನ ಪಾದವನ್ನು ಪೂಜಿಸಿ ತೊಳೆದ ನೀರನ್ನು ಮನೆಯ ಎಲ್ಲಾ ಭಾಗಗಳಿಗೂ ಚುಮುಕಿಸುವುದರಿಂದ ಪವಿತ್ರವಾಯಿತು ಎಂಬ ಆಚರಣೆ ಹಿಂದೂಗಳಲ್ಲಿ ಇದೆ. ಗೋಮಯದಲ್ಲಿ ಲಕ್ಷ್ಮಿ ಇರುವಳೆಂದು, ಗಂಜಲದಲ್ಲಿ ಗಂಗಾಮಾತೆ ಇರುವಳೆಂಬ ನಂಬಿಕೆ ಈಗ ಕಡಿಮೆಯಾಗಿ ಇಂದು ಜನರಿಗೆ ಹಸುವಿಗಿಂತ ಅದು ಕೊಡುವ ಹಾಲಿನ ಮೇಲೆಯೇ ಹೆಚ್ಚು ಪ್ರೀತಿ ಎಂಬಂತಾಗಿ ದನಕರುಗಳನ್ನು ಚೆನ್ನಾಗಿ ದುಡಿಸಿಕೊಂಡು ಮುಪ್ಪಿನ ಕಾಲದಲ್ಲಿ ಕಸಾಯಿಖಾನೆಗೆ ಸಾಗಿಸುವವರು ಹೆಚ್ಚಾಗಿದ್ದಾರೆ. **'ಹಾಲುಂಡ ಹಸುವ ವಧೆ ಮಾಡಬ್ಯಾಡ ಕಡೆಗಾಲದಲ್ಲಿ ಹೆತ್ತ ತಾಯಿಯ ಕಡೆಗಾಣಿಸಬ್ಯಾಡ'** ಎಂಬ ಗಾದೆ ಇಂದಿನ ಬದುಕಿಗೆ ಬಹಳ ಸೂಕ್ತವಾಗಿ ಹೊಂದಾಣಿಕೆಯಾಗುತ್ತದೆ. ಇಂದು ದಿನದಿಂದ ದಿನಕ್ಕೆ ಗೋತಳಿಗಳು ಕುಸಿಯುತ್ತಿವೆ. ಅವುಗಳ ಸಂರಕ್ಷಣೆಗೆ ಪ್ರತಿಯೊಬ್ಬರು ಶ್ರಮಿಸಬೇಕಾಗಿದೆ ಮತ್ತು ಜನರಲ್ಲಿ ಜಾಗೃತಿ ಮೂಡಿದಾಗ ಮಾತ್ರ ನಾವು ಭವಿಷ್ಯದಲ್ಲಿ ನಂದನವನ ಕಾಣಬಹುದೇನೋ? ❑

**ಭಾರತೀಯ ಭಾಷೆಗಳಲ್ಲಿ ಕನ್ನಡ ಭಾಷೆಗೆ ವಿಶಿಷ್ಟ ಸ್ಥಾನವಿದೆ. ಕಾವ್ಯ, ಕಾದಂಬರಿ, ನಾಟಕ, ವಿಮರ್ಶೆ ಮೊದಲಾದ ಕ್ಷೇತ್ರಗಳಲ್ಲಿ ನೂರಾರು ಜನ ವಿದ್ವಾಂಸರು ತಮ್ಮ ಮೌಲಿಕ ಕೃತಿಗಳ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಬೆಳೆಸಿದ್ದಾರೆ. ಶ್ರೀಮಂತಗೊಳಿಸಿದ್ದಾರೆ. ನಾಡಿನ ಹಾಗೂ ರಾಷ್ಟ್ರದ ಉನ್ನತ ಪ್ರಶಸ್ತಿಗಳನ್ನು ತಮ್ಮದಾಗಿಸಿಕೊಂಡಿದ್ದಾರೆ. ರಾಷ್ಟ್ರದಲ್ಲಿ ಸಾಹಿತ್ಯ ಕ್ಷೇತ್ರಕ್ಕೆ ನೀಡುವ ಅತ್ಯುನ್ನತ ಗೌರವಾನ್ವಿತ ಪ್ರಶಸ್ತಿಯಾದ 'ಜ್ಞಾನಪೀಠ' ಪ್ರಶಸ್ತಿಯನ್ನು ಕನ್ನಡದ ಏಳು ಸಾಹಿತ್ಯ ದಿಗ್ಗಜಗಳಾದ ಡಾ|| ಕುವೆಂಪು, ಡಾ. ದ.ರಾ. ಬೇಂದ್ರೆ, ಡಾ|| ಶಿವರಾಮ ಕಾರಂತ, ಡಾ|| ಮಾಸ್ತಿ ವೆಂಕಟೇಶ ಐಯ್ಯಂಗಾರ್, ಡಾ|| ವಿ.ಕೃ. ಗೋಕಾಕ್, ಡಾ|| ಯು.ಆರ್. ಅನಂತಮೂರ್ತಿ ಮತ್ತು ಡಾ|| ಗಿರೀಶ್ ಕಾರ್ನಾಡ್ ಅವರು ಪಡೆದು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಸ್ಥಾನವನ್ನು ತಂದುಕೊಟ್ಟಿದ್ದಾರೆ.**

## ವಿಚಾರ

# ಸ್ವಾಮಿ ವಿವೇಕಾನಂದರ ಕೆಲವು ವಿಚಾರಗಳು

-ಶಕುಂತಲಾ ಮಠ *

ಮಹಾತ್ಮಾ ಗಾಂಧೀಜಿಯವರನ್ನು ಬಿಟ್ಟರೆ ಈ ದೇಶವನ್ನು ಕುರಿತು ಸ್ಪಷ್ಟವಾದ ಅಭಿಪ್ರಾಯ ನೀಡಿದವರು, ಈ ದೇಶ ಹೇಗೆ ಇರಬೇಕೆಂದು ನೇರ ಮಾತುಗಳಲ್ಲಿ ತಿಳಿಸಿದವರು ಸ್ವಾಮಿ ವಿವೇಕಾನಂದರು. ಪರಿವ್ರಾಜಕರಾಗಿ ಭಾರತದ ಉದ್ದಗಲಕ್ಕೂ, ವಾಹನ ಸೌಕರ್ಯವಿಲ್ಲದ ಕಾಲದಲ್ಲಿ ಸಂಚರಿಸಿ, ಜನರ ಜೀವನ, ದುಃಖದುಮ್ಮಾನ, ದೌರ್ಬಲ್ಯ ಗಳನ್ನು ಕಣ್ಣಾರೆ ಕಂಡವರು. ಅಲ್ಲದೆ ಅವರ ಉದ್ಧಾರಕ್ಕೆ ಚಿಂತಿಸಿದವರು, ವಿದೇಶಗಳಲ್ಲಿಯೂ ಸುತ್ತಾಡಿದವರು.

ಒಂದು ದಿನ ಕಾಶಿಯ ಬೀದಿಯಲ್ಲಿ ಹೋಗುತ್ತಿದ್ದಾಗ ಕೆಲವು ಮಂಗಗಳು ಬೆನ್ನು ಹತ್ತಿದವು. ಅವುಗಳಿಂದ ತಪ್ಪಿಸಿಕೊಳ್ಳಲು ಓಡತೊಡಗಿದರಂತೆ. ಆಗ ಒಬ್ಬರು 'ಸ್ವಾಮಿಗಳೇ ಓಡಬೇಡಿ ಅವುಗಳನ್ನು ಎದುರಿಸಿ' ಎಂದಾಗ ವಿವೇಕಾನಂದರು ನಿಂತು ಧೈರ್ಯವಾಗಿ ಎದುರಿಸಿದಾಗ ಮಂಗಗಳು ಓಡಿಹೋದವು. ಈ ಘಟನೆ ಬಗ್ಗೆ ಹೇಳಿತ್ತಾ, ಅಜ್ಞಾನವನ್ನು, ಭ್ರಾಂತಿಯನ್ನು, ಪ್ರಕೃತಿಯನ್ನು ಎದುರಿಸಿದಾಗ ಅದರ ಹಿಂದಿರುವ ಸತ್ಯ ಗೋಚರವಾಗುವುದು. ಧೀರರು ಮಾತ್ರ ಪ್ರಪಂಚವನ್ನು ಎದುರಿಸಬಲ್ಲರು.

೧೮೯೩ರಲ್ಲಿ ಸೆಪ್ಟೆಂಬರ್ ತಿಂಗಳಲ್ಲಿ ಅಮೆರಿಕಾ ದೇಶದ ಚಿಕಾಗೋ ನಗರದಲ್ಲಿ ನಡೆದ ಸರ್ವಧರ್ಮ ಸಮ್ಮೇಳನದಲ್ಲಿ ಭಾಗವಹಿಸಿ ಹಿಂದೂ ಧರ್ಮವನ್ನು ವಿದೇಶಿಯರಿಗೆ ಪರಿಚಯಿಸಿದ್ದಲ್ಲದೇ ಉಪನ್ಯಾಸದ ಪ್ರಾರಂಭದಲ್ಲಿ 'ಅಮೆರಿಕಾ ದೇಶದ ನನ್ನ ಸಹೋದರ ಸಹೋದರಿಯರೇ' ಎಂಬ ವಾಕ್ಯ ವಿಶ್ವಭ್ರಾತೃತ್ವವನ್ನು ಪ್ರತಿಪಾದಿಸಿದ್ದಲ್ಲದೇ ಅವರ ಆಕರ್ಷಕ ವ್ಯಕ್ತಿತ್ವ ಗಮನ ಸೆಳೆಯಿತು.

ಚಿಕಾಗೋದಲ್ಲಿ ಒಂದು ದಿನ ಸ್ವಾಮಿಜಿ ನಿಲುವಂಗಿಯನ್ನು ಧರಿಸಿ ರಸ್ತೆಯಲ್ಲಿ ಹೋಗುತ್ತಿರುವಾಗ ಈ ಬಟ್ಟೆಯನ್ನು ನೋಡಿದ ಅಮೆರಿಕಾದ ಮಹಿಳೆ ಒಬ್ಬರು, ತಮ್ಮ ಪತಿ ಬಳಿ 'ಇವರನ್ನು ನೋಡಿದರೆ, 'ಜಂಟಲ್‌ಮನ್' ತರ ಕಾಣುತ್ತಿಲ್ಲ ಅಲ್ಲವೇ?' ಎಂದರಂತೆ. ಇದು ಹೇಗೋ ವಿವೇಕಾನಂದರ ಕಿವಿಗೆ ಬಿದ್ದು, ಆ ಮಹಿಳೆ ಬಳಿ ಹೋಗಿ 'ಕ್ಷಮಿಸಿ ಮೇಡಂ, ನಿಮ್ಮ ರಾಷ್ಟ್ರದಲ್ಲಿ ದರ್ಜಿ ಹೊಲೆದ ಡ್ರೆಸ್ 'ಜಂಟಲ್‌ಮನ್' ಗಳನ್ನು ನಿರ್ಧರಿಸುತ್ತದೆ. ಆದರೆ ಭಾರತದಲ್ಲಿ ನಮ್ಮೊಳಗಿನ ವ್ಯಕ್ತಿತ್ವವನ್ನು, ಸಭ್ಯತೆಯನ್ನು ನಿರ್ಧರಿಸುತ್ತದೆ' ಎಂದು ವಿನಯಪೂರ್ವಕವಾಗಿ ಹೇಳಿದರಂತೆ.

ಶ್ರೀ ರಾಮಕೃಷ್ಣ ಪರಮಹಂಸರನ್ನು ಗುರುವಾಗಿ ಸ್ವೀಕರಿಸಿ, ಅವರ ಧ್ಯೇಯೋದ್ದೇಶ ಸಾಧನೆಗೆ ೧೮೯೭ರಲ್ಲಿ ಶ್ರೀರಾಮಕೃಷ್ಣ ಮಹಾಸಂಘ ಸ್ಥಾಪಿಸಿದರು. ತ್ಯಾಗ ಮತ್ತು ಸೇವೆಗಳಿಗೆ ಪ್ರಾಮುಖ್ಯತೆ ನೀಡಿದ್ದರು. ದೀನದಲಿತರ ಸೇವೆಯಲ್ಲಿ ಭಗವಂತನನ್ನು ಕಂಡರು.

ವಿವೇಕಾನಂದರ ಕೆಲ ವಿಚಾರಗಳನ್ನು ಇಂದಿಗೂ ಮನನ ಮಾಡಿಕೊಳ್ಳಬೇಕಾಗಿದೆ.

* ಏಳಿರಿ, ಎದ್ದೇಳಿರಿ, ಗುರಿ ಮುಟ್ಟುವವರೆಗೆ ವಿಶ್ರಮಿಸದಿರಿ.
* ಯಾರು ಇತರರಿಗಾಗಿ ಬದುಕುವರೋ, ಅವರೇ ನಿಜವಾಗಿ ಬದುಕಿರುವವರು ಉಳಿದವರು ಬದುಕಿದ್ದರೂ ಸತ್ತಂತೆ.
* ಶುದ್ಧವಾಗಿರುವುದು ಪರರಿಗೆ ಹಿತವನ್ನು ಮಾಡುವುದು ಎಲ್ಲ ಪೂಜೆಯ ಸಾರ.
* ಯಾರು ಜಾತಿ ಕುಲ ಗೋತ್ರ ಜನಾಂಗವನ್ನು ಗಮನಿಸದೆ ಒಬ್ಬ ದೀನನಿಗೆ ಸಹಾಯ ಮಾಡುವನೋ ದೀನನನ್ನು ಸೇವಿಸುವನೋ ಅವನನ್ನು ಕಂಡರೆ ಶಿವ, ತನ್ನನ್ನು ದೇಗುಲದಲ್ಲಿ ಮಾತ್ರ ನೋಡುವ ಭಕ್ತರಿಗಿಂತ ಹೆಚ್ಚು ಮೆಚ್ಚುವನು.
* ಮನುಷ್ಯನಿಗೂ ಪ್ರಾಣಿಗೂ ಇರುವ ಮುಖ್ಯ ವ್ಯತ್ಯಾಸವೇ ಇವರಲ್ಲಿರುವ ಏಕಾಗ್ರತೆಯ ಶಕ್ತಿಯ ಅಂತರ. ಪ್ರಾಣಿಗಳಿಗೆ ಸ್ವಲ್ಪ ಏಕಾಗ್ರತೆ ಶಕ್ತಿ ಇದೆ. ಏಕಾಗ್ರತೆ ಶಕ್ತಿ ಹೆಚ್ಚಿದಷ್ಟು ನಮ್ಮ ಜ್ಞಾನಾರ್ಜನೆಯು ಹೆಚ್ಚುವುದು. ಮನೋ ಏಕಾಗ್ರತೆ ಜ್ಞಾನದ ಮೂಲ ಮತ್ತು ಏಕಾಗ್ರತೆ ಹೆಚ್ಚಿದಷ್ಟು ಕೆಲಸ ಚೆನ್ನಾಗಿ ಆಗುವುದು.
* ಮನುಷ್ಯನಲ್ಲಿ ಆಗಲಿ ಅಂತರ್ಗತವಾಗಿರುವ ಪರಿಪೂರ್ಣತೆಯನ್ನು ವ್ಯಕ್ತಗೊಳಿಸುವುದೇ ವಿದ್ಯಾಭ್ಯಾಸ.
* ನನಗೆ ನೂರು ಮಂದಿ ಧೀರ ಯುವಕರನ್ನು ಕೊಡಿ ಅವರಿಂದ ದೇಶದ ಭವಿಷ್ಯವನ್ನು ಬದಲಿಸಬಲ್ಲೆ.
* ಸ್ವಾರ್ಥವೇ ಪ್ರತಿಯೊಬ್ಬನಲ್ಲಿಯೂ ಇರುವ ಪಿಶಾಚಿ. ಸ್ವಾರ್ಥವನ್ನು ಒಂದು ಕಡೆಯಿಂದ ಹೊರದೂಡಿದರೆ ಮತ್ತೊಂದು ಕಡೆಯಿಂದ ದೇವರು ಬರುವನು.
* ಭಾರತ ದೇಶದ ಭವಿಷ್ಯವಿರುವುದು ಅವರ ಆಧ್ಯಾತ್ಮಿಕತೆಯಲ್ಲಿ. ಆಧ್ಯಾತ್ಮಿಕತೆಯನ್ನು ಬದಿಗೆ ಸರಿಸಿ ಪಾಶ್ಚಾತ್ಯ ಭೌತಿಕ ನಾಗರೀಕತೆಯನ್ನು ಬೆನ್ನು ಹತ್ತಿದಿರೆಂದರೆ ಇನ್ನು ಮೂರು ಪೀಳಿಗೆಗಳಲ್ಲಿ ಜನಾಂಗವು ನಾಮಾವಶೇಷವಾಗುತ್ತದೆ. ಏಕೆಂದರೆ ಅದರಿಂದ ರಾಷ್ಟ್ರದ ಬೆನ್ನೆಲುಬು ಮುರಿಯುತ್ತದೆ. ನಮ್ಮ ರಾಷ್ಟ್ರ ಜೀವನದ ಮಂದಿರದ, ಪಾಯವೇ ಕುಸಿಯುತ್ತದೆ. ಕಡೆಗೆ ಸರ್ವನಾಶವೇ ನಮ್ಮ ಗತಿಯಾಗುತ್ತದೆ.
* ಯಾವ ಶಿಕ್ಷಣ ಜನ ಸಾಮಾನ್ಯರನ್ನು ಜೀವನ ಸಂಗ್ರಾಮಕ್ಕೆ ಸಮರ್ಥವಾಗಿ ಮಾಡುವುದಿಲ್ಲವೋ, ಯಾವುದು ಮನುಷ್ಯನಿಗೆ ಚಾರಿತ್ರ್ಯ ಬಲ, ಸೇವಾತತ್ಪರತೆ, ಸಾಹಸಿಕತೆ ಇವುಗಳನ್ನು ಒದಗಿಸುವುದಿಲ್ಲವೋ ಅದು ಶಿಕ್ಷಣ ಹೆಸರಿಗೆ ಯೋಗ್ಯವಲ್ಲ. ವ್ಯಕ್ತಿಯನ್ನು ಅವಲಂಬಿಯನ್ನಾಗಿ ಮಾಡುವುದೇ ಶಿಕ್ಷಣ. ❑

* 'ಜ್ಯೋತಿರ್ಲಿಂಗ', ಮೊದಲನೇ ಒಳಬೀದಿ, ಹೈಸ್ಕೂಲ್ ಬಡಾವಣೆ, ಹೊನ್ನಾಳಿ, ದಾವಣಗೆರೆ ಜಿಲ್ಲೆ.



## ನೆನಪು

# ಮಕ್ಕಳ ನಾಡಿಮಿಡಿತವರಿತಿದ್ದ ಅಕ್ಕರೆಯ ಅಪ್ಪ ಶ್ರೀ ಶ್ರೀಗಳವರು

-ಕೆ.ಜಿ. ರಂಗಯ್ಯ *

ಪಾಠಶಾಲಾ ಮಹಡಿಯ ಮೇಲಿದ್ದ ನನ್ನ ಸಹಪಾಠಿಗಳಲ್ಲಿ ಆತ್ಮೀಯ ಗೆಳೆಯನಾಗಿದ್ದ ಗಿರಿಯಪ್ಪನಿಗೆ ಸಿನಿಮಾ ನೋಡುವ ಹುಚ್ಚು, ಅದಕ್ಕಾಗಿ ತುಮಕೂರಿಗೇ ಹೋಗಬೇಕಾಗುತ್ತಿತ್ತು. ದೈನಂದಿನ ಸಂಜೆಯ ಶ್ರಮದಾನ, ಸಾಮೂಹಿಕ ಪ್ರಾರ್ಥನೆ, ರಾತ್ರಿಯ ಊಟ ಇವುಗಳಿಗೆ ತಪ್ಪಿಸಿಕೊಳ್ಳುವಂತಿರಲಿಲ್ಲ. ಗೆಳೆಯನಿಗೆ ಆಸೆ ತೀವ್ರವಾದಾಗ ತಿಂಗಳಿಗೊಮ್ಮೆಯೋ ಇಲ್ಲ; ಎರಡು ಬಾರಿಯೋ ರಾತ್ರಿಯ ಎರಡನೇ ಷೋಗೆ ೯ರ ನಂತರ ಒಬ್ಬನೇ (ಏಕೆಂದರೆ ಇಬ್ಬರಾದರೆ ಗುಟ್ಟು ರಟ್ಟಾಗುವುದೆಂಬ ಭೀತಿ) ಹೋಗಿ ೧ಗಂಟೆಯ ಹೊತ್ತಿಗೆ ಕಳ್ಳಹೆಜ್ಜೆ ಹಾಕುತ್ತಾ ಬಂದು, ಒಂದು ಸುಳಿವೂ ಕೊಡದಂತೆ ತನ್ನ ಜಾಗದಲ್ಲಿ ಮಲಗುತ್ತಿದ್ದುದನ್ನು ನೆನೆದರೆ ಅವನಿಗೆ 'ಚೋರಶಿರೋಮಣಿ' ಎಂಬ ಬಿರುದಿಗಿಂತ 'ಧೀರಶಿಖಾಮಣಿ' ಎಂಬ ಬಿರುದನ್ನೇ ನೀಡಬಹುದಿತ್ತೇನೋ ಎನ್ನಿಸುತ್ತದೆ. ರೂಮಿನಲ್ಲಿ ನನ್ನ ಪಕ್ಕದ ಜಾಗದಲ್ಲೇ ಅವನ ಟ್ರಂಕು-ಚಾಪೆಗಳು. ರಾತ್ರಿ ಊಟದ ನಂತರ ಎಲ್ಲರೂ ಪುಸ್ತಕ ಹಿಡಿದು ಓದುತ್ತಾ ಬರೆಯುತ್ತ ಕುಳಿತುಕೊಳ್ಳುತ್ತಿದ್ದೆವು. ಒಂದುರಾತ್ರಿ ಅವನು ೮ ಗಂಟೆಗೆಲ್ಲಾ ಬರೆಯುತ್ತಿದ್ದುದನ್ನು ಅರ್ಧವಾಕ್ಯದಲ್ಲೇ ನಿಲ್ಲಿಸಿ ತೆರೆದಿಟ್ಟ ಪುಸ್ತಕದ ಮೇಲೆ ಮುಚ್ಚಳ ತೆರೆದಿದ್ದ ಪೆನ್ನನ್ನಿಟ್ಟು ಪ್ರಕೃತಿಯ ಕರೆಗೆ ಹೋಗಿ ಬರುವವನ ತರಹ ನಟಿಸಿ ಯಾವ ಮಾಯದಲ್ಲೋ ಅಲ್ಲಿಂದ ಮಾಯವಾಗಿ ಬಿಟ್ಟಿದ್ದ. ಕೊಠಡಿಯ ಮೇಲ್ವಿಚಾರಕರಾಗಲೀ ಅಥವಾ ಶ್ರೀ ಶ್ರೀಗಳವರೇ ಆಗಲಿ ಪರಿಶೀಲನೆಗೆಂದು ಭೇಟಿಕೊಟ್ಟಾಗ 'ಈಗ ಎಲ್ಲೋ ಆಚೆಗೆ ಹೋದ' ಎನ್ನುವ ನನ್ನ ಉತ್ತರ ಯಾವುದೇ ಅನುಮಾನ ಕ್ಕೆಡೆಕೊಡಲಿಲ್ಲ. ಏಕೆಂದರೆ ಸುಳ್ಳನ್ನರಿಯದ ಮುಗ್ಧನೆಂದೇ ನನ್ನನ್ನು ಎಲ್ಲರೂ ನಂಬಿದ್ದರು. ನಾನೂ ಸಹ ಅವನು ಈ ರೀತಿ ಹೊರಹೋದಾಗ ಪ್ರಾಯಶಃ ಮೇಲ್ವಿಚಾರಕರಾಗಿದ್ದ ಮಾನ್ಯಶ್ರೀ ದೊಡ್ಡಹೊನ್ನಯ್ಯನವರು ಅವನ ಸಂಬಂಧಿಗಳೂ ಆಗಿದ್ದುದರಿಂದ ಅವರನ್ನೇ ಕಾಣಲು ಹೋಗಿರಬಹುದೆಂದೇ ತಿಳಿಯುತ್ತಿದ್ದೆ. ಆದರೆ ಅಂದು ನಾನು ಮೇಲ್ವಿಚಾರಕರಿಗೆ ಗೆಳೆಯನು ತಮ್ಮ ಕರೆಯ ಮೇರೆಗೆ ಹೊರಗೆ ಹೋಗಿರಬಹುದೆಂದು ತಿಳಿಸಿದಾಗ ಅವರು 'ಅವನು ಬಂದ ಕೂಡಲೇ ನನ್ನರೂಮಿಗೆ ಕಳಿಸು' ಎಂದು ತಿಳಿಸಿಹೋದರು. ಅವನು ರಾತ್ರಿ ಹತ್ತಾದರೂ ಬರಲಿಲ್ಲವಾದ್ದರಿಂದ ಎಲ್ಲರಂತೆ ನಾನು ನಿದ್ದೆಗೆ ಶರಣಾದೆನು. ಬೆಳಗಿನ ಜಾವ ೪.೩೦ಕ್ಕೆ ಮಾಮೂಲಿನಂತೆ ಎಲ್ಲರೂ ಓದಲು ಎದ್ದಾಗ ಗೆಳೆಯ ನನ್ನ ಪಕ್ಕದಲ್ಲೇ ಗೊರಕೆ ಹೊಡೆಯುತ್ತಾ ಮಲಗಿದ್ದುದನ್ನು ಕಂಡು ವಿಸ್ಮಿತನಾದೆನು. ಅವನನ್ನೆಬ್ಬಿಸಿ ರಾತ್ರಿ ನಡೆದದ್ದನ್ನು ತಿಳಿಸಿದಾಗ ಅವನ ಅಪರಾಧೀ ಮನಸ್ಸಿನ ಕುರುಹು ಮುಖದಲ್ಲಿ ಮಿಂಚಿತು. ಬೆಳಿಗ್ಗೆ ಮೇಲ್ವಿಚಾರಕರು ಅವನನ್ನು ಕರೆಸಿ ಕೂಲಂಕುಷ ತನಿಖೆಗೊಳಪಡಿಸಿದಾಗ ನಿಜಾಂಶ ಹೊರಬಿದ್ದಿತು. ಅಂದು ರಾತ್ರಿ ಅವನು 'ವೀರಪಾಂಡ್ಯ ಕಟ್ಟಾಬೊಮ್ಮನ್' ತಮಿಳು ಸಿನಿಮಾ ನೋಡಿಬಂದಿದ್ದ! ಮೇಲ್ವಿಚಾರಕರು ಅವನಿಗೆ ಕೊಡಬೇಕಾದ್ದನ್ನು ಕೊಟ್ಟು ಅವನನ್ನು ಶ್ರೀ ಶ್ರೀಗಳವರ ಬಳಿಗೆ ಕರೆದೊಯ್ದಾಗ ಸನ್ನಿಧಿಯವರು ಅವನ ಬಾಯಿ ಬಿಡಿಸಿದಾಗ ನಮಗೆಲ್ಲಾ ಅಚ್ಚರಿಯೋ ಅಚ್ಚರಿ. ಅವನು ಆ ವೇಳೆಗಾಗಲೇ ತಮಿಳಿನ ಇನ್ನೂ ಐದಾರು ಸಿನಿಮಾಗಳನ್ನು ನೋಡಿಯಾಗಿತ್ತು. ತಲೆಬಾಗಿ ಕೈಕಟ್ಟಿ ನಿಂತು ಅವನು ಉಸುರಿದ ಸಿನಿಮಾಗಳ ಹೆಸರಿನ ಪಟ್ಟಿ 'ವಂಜಿಕ್ಕೋಟ್ಟೆ ವಾಲಿಬಾನ್', ಕಣವನೇ ಕಣ್ ಕಂಡ ದೈವಂ.. ತಮಿಳಿನ ಗಂಧವರಿಯದ ನನಗೆ ಆ ಹೆಸರುಗಳಾದರೂ ಎಲ್ಲಿ ನೆನಪಿನಲ್ಲಿದ್ದಾವು? ಶ್ರೀ ಶ್ರೀಗಳವರು ಅವನ ತಮಿಳು ಭಾಷೆಯ ಜ್ಞಾನ ಮತ್ತು ವ್ಯಾಮೋಹಗಳ ಬಗ್ಗೆ ವಿಚಾರಿಸಿದಾಗ ಅವನು ತಿಳಿಸಿದ್ದೇನೆಂದರೆ ತನಗೆ ತಮಿಳಿನ ಗಂಧ ಗೊತ್ತಿಲ್ಲದಿದ್ದರೂ ತಮಿಳು ಸಿನಿಮಾಗಳನ್ನೇ ನೋಡುತ್ತಿದ್ದುದಕ್ಕೆ ಕಾರಣ ಅವನ ಮೆಚ್ಚಿನ ಹೀರೋಗಳಾದ ಎಂ.ಜಿ. ರಾಮಚಂದ್ರನ್, ಶಿವಾಜಿ ಗಣೇಶನ್ ಇವರ ಅಬ್ಬರದ ಡೈಲಾಗ್‌ಗಳು ತನಗೆ ಇಷ್ಟವೆಂದೂ ಅವುಗಳಲ್ಲಿ ಸಿಗುವ ಥ್ರಿಲ್ ಬೇರೆ ಭಾಷೆಯ ಡೈಲಾಗ್‌ಗಳಲ್ಲಿ ಸಿಗುವುದಿಲ್ಲವೆಂದೂ ಒಪ್ಪಿಸಿದ.

* ನಿವೃತ್ತ ಮುಖ್ಯಶಿಕ್ಷಕರು, ಕೆಂಕೆರೆಪಾಳ್ಯ, ಸುಗ್ಗನಹಳ್ಳಿ ಅಂಚೆ, ಮಾಗಡಿ ತಾ॥, ರಾಮನಗರ ಜಿಲ್ಲೆ.

ಶ್ರೀ ಶ್ರೀಗಳವರು ಇದನ್ನು ಕೇಳಿ 'ಆ ಥ್ರಿಲ್ ನಿನ್ನ ಸ್ನೇಹಿತರಿಗೂ ಸಿಗಲಿ, ಒಂದೆರಡು ಡೈಲಾಗ್‌ಗಳನ್ನು ಒಪ್ಪಿಸು' ಎಂದಪ್ಪಣೆ ಕೊಡಿಸಿದಾಗ ನಾಚುತ್ತಲೇ ಭಯದಿಂದ ಅವನು ಒಪ್ಪಿಸಿದ ಡೈಲಾಗ್‌ಗಳನ್ನು ಕೇಳಿ ಅಲ್ಲಿ ನೆರೆದಿದ್ದ ನಾವು ಚಪ್ಪಾಳೆ ತಟ್ಟಿದರೆ ತಪ್ಪಾಗುತ್ತದೆಂಬ ಅರಿವಿನಿಂದ ಒಳಗೊಳಗೇ ಆನಂದಿಸಿ ಸುಮ್ಮನಾದೆವು. ಅವನ ತಮಿಳು ಡೈಲಾಗ್ ಅಪ್ಪಟ ತಮಿಳೋ ಅಲ್ಲವೋ ಅದರ ಗಂಧ ವರಿಯದ ನಮಗಂತೂ ಬೆಪ್ಪಾಗಿ ನಿಂತು ಅದನ್ನು ಕೇಳಿದ್ದೇ ಖುಷಿ. ಸಿಟ್ಟಿನಲ್ಲೂ ಶ್ರೀಗಳವರು ಪಟ್ಟ ಖುಷಿಯನ್ನು, ಅವರನ್ನು ಆಗ ನೋಡಿದ ನಾವಲ್ಲದೆ ಇನ್ನಾರು ಬಣ್ಣಿಸಲು ಸಾಧ್ಯ? ಶ್ರೀಗಳವರು ಅವನನ್ನು 'ಡೈಲಾಗ್‌ಗಳನ್ನು ಹೇಗೆ ಜ್ಞಾಪಕ ವಿಟ್ಟುಕೊಳ್ಳುತ್ತೀಯಾ?' ಎಂದು ಕೇಳಿದಾಗ ಬಯಲಾದ ಇನ್ನೊಂದು ರಹಸ್ಯವೆಂದರೆ ಒಂದೇ ಸಿನಿಮಾವನ್ನು ಮೂರ್ನಲ್ಕು ಬಾರಿ ತಾನು ನೋಡಿದ್ದಾಗಿ ತಿಳಿಸಿದ್ದು. ಆಗ ಶ್ರೀಗಳವರು ತಾವೇ ಬೋಧಿಸಿದ್ದ ರವೀಂದ್ರನಾಥ ಠಾಕೂರರ 'This is my prayer to thee....' ಪದ್ಯವನ್ನೊಪ್ಪಿಸುವಂತೆ ಕೇಳಿದಾಗ ಬೆಪ್ಪನಂತೆ ತೆಪ್ಪಗೆ ನಿಂತ ಅವನನ್ನು ನೋಡಿ ನಮಗೆ ಒಳಗೊಳಗೆ ನಗು. ಅದೇ ಪದ್ಯವನ್ನು ಒಪ್ಪಿಸುವಂತೆ ನನ್ನನ್ನು ಕೇಳಿದಾಗ ಚಾಚೂ ತಪ್ಪದೆ ಒಪ್ಪಿಸಿದ ಆ ರಸಘಳಿಗೆ ಇನ್ನೂ ನೆನಪಿದೆ. ತಮಿಳು ಸಿನಿಮಾ ಹುಚ್ಚಿನ ನಮ್ಮ ಮೆಚ್ಚಿನ ಗೆಳೆಯನ ಕಿವಿಗಳು ಕೆಂಪಾದದ್ದು ಮಾತ್ರವಲ್ಲ, ಅವನು ತನ್ನ ಮೊಣಕಾಲುಗಳ ಮೇಲೆ ಕೈಯಾಡಿಸುತ್ತಾ ಕುಣಿದಿದ್ದು ಕೂಡ ನೆನಪಿಗೆ ಬಂದರೆ ಇಂದಿಗೂ ನಮಗೆ ಆ ಖುಷಿ ಮರುಕಳಿಸುತ್ತದೆ. ❑

## ಜೀವನದ ಗುರಿ

ಜೀವನವನ್ನು ಇದ್ದಕ್ಕಿದ್ದಂತೆ ಒಪ್ಪಬೇಕೆನ್ನುವುದು ಮಾನವ ಸ್ವಭಾವಕ್ಕೆ ಒಗ್ಗದ ವಿಷಯ. ಮನುಷ್ಯನಿಗೆ ಅದರಿಂದ ತೃಪ್ತಿಯಿಲ್ಲ. ಆತನ ಎದೆಯಲ್ಲಿ ಹುದುಗಿಕೊಂಡಿರುವ ಒಂದು ಶಕ್ತಿಯು ಆತನನ್ನು ಮುಂದೆ ಸಾಗುವಂತೆ ನಿರಂತರವೂ ಪ್ರೇರೇಪಿಸುತ್ತದೆ.

ಇರುವ ರೀತಿಯಲ್ಲಿಯೇ ಜಗತ್ತನ್ನು ಕಾಯ್ದಿರಿಸುವುದು ಜೀವನದ ಅಂತಿಮ ಗುರಿಯಲ್ಲ. ಜಗತ್ತು ಮೇಲಕ್ಕೆ ಬರಬೇಕಾಗಿದೆ. ಯೋಗ್ಯ ರೀತಿಯಲ್ಲಿ ಬದುಕು ವ್ಯಕ್ತಿತ್ವದ ಪರಿಪೂರ್ಣತೆಯನ್ನು ಸಾಧಿಸಬೇಕೆಂದು ಪ್ರತಿಯೊಬ್ಬ ಮನುಷ್ಯನೂ ಬಯಸುತ್ತಾನೆ. ಜೀವನವನ್ನು ಇರುವಂತೆ ಒಪ್ಪಿ ಹೆಚ್ಚಿನ ಸಾಹಸಕ್ಕೆ ತೊಡಗುವುದೇ 'ನೈತಿಕಪ್ರಗತಿ'ಯಾಗಿದೆ.

ಹಿಂದಿನ ಜೀವನದ ಬಗೆಗಳನ್ನು ಈಗ ಪುನರುಚ್ಚರಿಸುತ್ತ ಕೂಡಬೇಕಾದುದಿಲ್ಲ. ಹಾಗೆ ಶಕ್ಯವಾಗಬಹು ದಾದರೂ ಅದು ಉಚಿತವೆನಿಸಲಾರದು. ರಜಪೂತ ಯೋಧನ ಇಲ್ಲವೆ ಮಧ್ಯಯುಗದ ಸರದಾರನ ರೀತಿ ನೀತಿಗಳು ಆಧುನಿಕ ಕಾಲಕ್ಕೆ ಹೊಂದಿಕೆಯಾಗಲಾರವು. ಬದಲಾಗದಂಥ ಪರಿಸ್ಥಿತಿ ಸುತ್ತಮುತ್ತಲೂ ಇದೆಯೆಂದರೂ ಕೂಡ ನಮ್ಮ ಸಮಸ್ಯೆ ಅಲ್ಲಿಗೇ ಮುಗಿಯಲಿಲ್ಲ. ಯಾಕೆಂದರೆ ನಮ್ಮ ಆದರ್ಶಗಳು ಸದಾಕಾಲವೂ ಬದಲಾವಣೆ ಹೊಂದುತ್ತಲೇ ಇರುತ್ತವೆ. ಆದುದರಿಂದ ಜೀವನಕ್ಕೆ ನಾವು ಹೊಂದಿಕೊಳ್ಳುವುದಲ್ಲದೆ ನಮ್ಮ ಆದರ್ಶಗಳಿಗೆ ತಕ್ಕಂತೆ ಜೀವನವನ್ನು ಮಾರ್ಪಡಿಸುವುದೇ ನೈತಿಕ ಜೀವನದ ತಿರುಳಾಗಿದೆ.

ಇರುವ ರೀತಿಯಲ್ಲಿಯೇ ಜೀವನವನ್ನು ಒಪ್ಪುವುದು ಒಂದು ದೃಷ್ಟಿಯಿಂದ ಪರಿಪೂರ್ಣವಾಗಿ ತೋರಬಹುದು. ಆದರೆ ಅದು ಮಾನವ ಪರಿಪೂರ್ಣತೆಯಲ್ಲ. ಜೀವನಕ್ಕೆ ಹೊಂದಿಕೊಳ್ಳುವುದರಲ್ಲಿಯೂ ಒಂದು ಬಗೆಯ ಸೊಗಸು ಇದೆ. ಆದರೆ ಆ ಹೊಂದಿಕೆಯು ಕ್ಷಣಕ್ಷಣಕ್ಕೆ ಬದಲಾಗುತ್ತಿರುವ ಈ ವೈವಿಧ್ಯಮಯ ಜಗತ್ತಿನಲ್ಲಿ ಬಹುಕಾಲ ಬಾಳಲಾರದು.

ಜೀವನದ ಹಾದಿಯಲ್ಲಿ ವಿಶ್ರಾಂತಿ ಸ್ಥಳವೊಂದೂ ಇಲ್ಲ. ಒಂದೊಂದು ಸಾಧನೆಯೂ ಹೊಸ ಸಾಹಸಕ್ಕೆ ಪ್ರಚೋದನೆ ಕೊಡುವುದೇ ಆಗಿದೆ. ನೆಲಕ್ಕೆ ಹೊಂದಿಕೊಂಡ ಕಲ್ಲು ಮಣ್ಣಿನಂತೆ, ಜೀವನಕ್ಕೆ ಹೊಂದಿಕೊಳ್ಳುವುದಲ್ಲ. ಏರಬೇಕಾಗಿರುವ ಒಂದು ಎತ್ತರಕ್ಕೆ ಜಗತ್ತನ್ನು ಎತ್ತರಿಸುವವರೆಗೆ ಸಾಹಸಪಡುವುದೇ ಜೀವನದ ಚರಮ ಗುರಿ.

–ಡಾ॥ ಸರ್ವಪಲ್ಲಿ ರಾಧಾಕೃಷ್ಣನ್







# ಆಹಾರ ಸಾರ್ವಭೌಮತ್ವ

–ಈರಯ್ಯ ಕಿಲ್ಲೇದಾರ*

ಪ್ರಪಂಚದ ವಿವಿಧ ಜನಾಂಗಗಳು ಮತ್ತು ಸಂಸ್ಕೃತಿಗಳು ಆಹಾರ ಉತ್ಪಾದಿಸುವ ಹಲವಾರು ವಿಧಾನಗಳನ್ನು ಅನುಸರಿಸಿಕೊಂಡು ಬಂದಿವೆ. ನಿಯಮಕ್ಕೆ ತಕ್ಕ ಆಹಾರ ಉತ್ಪಾದನಾ ವಿಧಾನ ಮತ್ತು ಆಹಾರದ ಬಳಕೆಯ ಪರಿಯನ್ನು ತಿಳಿಸಿಕೊಟ್ಟಿವೆ. ಆದರೆ ಆಧುನಿಕ ಕೃಷಿಯ ಹೊಸ ಹೊಸ ಆವಿಷ್ಕಾರಗಳ ವಾತಾವರಣಕ್ಕೆ ಮತ್ತು ಜನರ ಆರೋಗ್ಯಕ್ಕೆ ಮಾರಕವಾದ ಹಾಗೂ ವಿನಾಶಕಾರಿಯಾದ ಕೃಷಿ ಪದ್ಧತಿಗಳನ್ನು ಜಾರಿಯಲ್ಲಿ ತರುತ್ತಿವೆ. ಹಸಿವು ಹಿಂಗಿಸಲಾರದ, ಹಸಿದ ಹೊಟ್ಟೆಗಳ ಸಂಖ್ಯೆಗೆ ಆಹಾರ ಉತ್ಪಾದಿಸುವ ನೆಪದಲ್ಲಿ ಆಹಾರ ರಾಜಕಾರಣ ಮಾಡುತ್ತಿರುವ ಸಂಗತಿ ಕಳವಳಕಾರಿಯಾಗಿದೆ. ಆಹಾರ ಉತ್ಪಾದಕರು ಯಾವುದನ್ನು ಉತ್ಪಾದಿಸಬೇಕು. ಯಾವುದು ಸುಲಭ ತಂತ್ರಜ್ಞಾನ, ಯಾವುದು ಸುಸ್ಥಿರವಾಗಿದೆ? ಎಂಬುದು ತಿಳಿಯದೆ ಗೊಂದಲದಲ್ಲಿ ಸಿಲುಕಿದ್ದಾರೆ. ಇದೇ ರೀತಿ ಆಹಾರ ಬಳಕೆದಾರರು ಸಹಿತ ಯಾವುದು ತಿನ್ನಬೇಕು, ಯಾವುದು ತಮ್ಮ ಆರೋಗ್ಯಕ್ಕೆ ಪೂರಕ ಅಥವಾ ಮಾರಕ ಎಂಬುದು ತಿಳಿಯದೆ ಗೊಂದಲಕ್ಕೊಳಗಾಗಿದ್ದಾರೆ. ಇಂಥ ಸಂದರ್ಭದಲ್ಲಿ ತಾರ್ಕಿಕ ಚೌಕಟ್ಟಿನಿಂದ ಹೊರಬಂದು ಹೊಸ ಚಿಂತನೆಗಳನ್ನು ಮಾಡಬೇಕಿದೆ.

ಆಹಾರ ಬೆಳೆಯುವಲ್ಲಿ, ಉತ್ಪಾದಿಸುವಲ್ಲಿ ಮತ್ತು ಬಳಕೆ ಮಾಡುವಲ್ಲಿ ರೈತರೇ ಅದರಲ್ಲೂ ಸಣ್ಣಸಣ್ಣ ರೈತರೇ ಪ್ರಮುಖರೆನಿಸಿದ್ದಾರೆ. ಆಹಾರ ಧಾನ್ಯಗಳ ಸಂಗ್ರಹಣೆಯಿಂದ ಆಹಾರ ಭದ್ರತೆ ಆಗಲಾರದು. ಆಹಾರ ಧಾನ್ಯಗಳನ್ನು ತನ್ನ ಸುತ್ತಲಿನ ಸನ್ನಿವೇಶ ಆಧಾರದ ಮೇಲೆ ಉತ್ಪಾದಿಸಿ, ಬಳಕೆ ಮಾಡಿ ಉಳಿಯುವ ಆಹಾರ ಧಾನ್ಯಗಳನ್ನು ಮಾರಾಟ ಮಾಡುವಲ್ಲಿ ರೈತರೇ ಸಾರ್ವಭೌಮರಾಗಬೇಕು. ಬೀಜ ಸಂರಕ್ಷಣೆಯಿಂದ, ಕೊಯ್ಲು ಮತ್ತು ಒಕ್ಕಣೆ ಹಾಗೂ ಸಂಗ್ರಹಣೆಯತನಕ ರೈತರು ಸ್ವತಂತ್ರರಾಗಿರಬೇಕು. ಯಾರ ಹಂಗಿಗೊಳಗಾಗುವ ಅವಶ್ಯಕತೆಯಿಲ್ಲ. ರೈತರ ಸಹಭಾಗಿತ್ವದ ಕ್ರಿಯಾತ್ಮಕ ಸಂಶೋಧನೆಗಳಿಂದ ಇದೆಲ್ಲ ಸಾಧ್ಯವಾದೀತು. ಕೃಷಿಯ ಔದ್ಯೋಗೀಕರಣ ಮತ್ತು ಭೂಮಿಯ ಬಳಕೆಯ ಆಧುನೀಕರಣವನ್ನು ಪ್ರಕೃತಿ ಮತ್ತು ಮಾನವನ ಬಾಂಧವ್ಯಕ್ಕೆ ಪರಿವರ್ತಿಸುವ ಪ್ರಯತ್ನಗಳು ನಡೆಯಬೇಕಿದೆ. ಜನರ ಸುಸ್ಥಿರ ಬದುಕಿಗಾಗಿ ಆಹಾರ ಸಾರ್ವಭೌಮತ್ವ ಸಾಧ್ಯವಾಗಿಸಲು ಉತ್ತಮ ಮತ್ತು ಶಕ್ತಿಯುತ ಸಂಘಟನೆಗಳ ಮೈತ್ರಿಯೊಂದಿಗೆ ಹೋರಾಟ ಮಾಡಬೇಕಾದ ಅವಶ್ಯಕತೆಯಿದೆ. ಇದೇ ಉದ್ದೇಶದಿಂದ ನಾಗರಿಕರು, ಆಹಾರ ಉತ್ಪಾದಕರು, ಆಹಾರ ಬಳಕೆದಾರರು ಮತ್ತು ನೀತಿ ನಿರೂಪಕರೊಡನೆ ಸಂವಾದಗಳನ್ನು ಏರ್ಪಡಿಸಲಾಗಿತ್ತು. ಪ್ರತಿಯೊಂದು ಸಮುದಾಯದ ಆಹಾರ ಉತ್ಪಾದಕರಿಗೆ ಇರುವ ನಿಸರ್ಗದ ಒಡನಾಟ ಮತ್ತು ಜನರ ಸಂಬಂಧವನ್ನು ಪ್ರತಿಬಿಂಬಿಸಲು ಮುಕ್ತ ಅವಕಾಶ ಕೊಡಲಾಗಿತ್ತು. ನ್ಯಾಯಯುತ ಮತ್ತು ಚಿಂತನೆಗೂ ಅದು ವೇದಿಕೆಯಾಗಿತ್ತು.

ಪ್ರಜಾಪ್ರಭುತ್ವ ಆಡಳಿತ ಉಳ್ಳ ದೇಶಗಳಲ್ಲಿ ಪ್ರಜಾಪ್ರಭುತ್ವಕ್ಕೆ ಚ್ಯುತಿ ಬರುತ್ತಿದೆ. ಇಂದಿನ ಕೃಷಿಕರ ಮುಂದಿರುವ ಸವಾಲುಗಳಿಗೆ ಕೃಷಿ ಸಂಶೋಧನೆಗಳು ಹೇಗೆ ಸ್ಪಂದಿಸುತ್ತವೆ? ಹಸಿರು ಕ್ರಾಂತಿ ಮತ್ತು ವಿಶ್ವವ್ಯಾಪಾರ ಒಪ್ಪಂದಗಳು ಕೃಷಿರಂಗದ ಹಾದಿ ತಪ್ಪಿಸಿವೆ. ರೈತರಲ್ಲಿದ್ದ ಸಾಂಪ್ರದಾಯಿಕ ಜ್ಞಾನವು ವೈಜ್ಞಾನಿಕತೆಯ ಹೆಸರಿನಲ್ಲಿ ನಡೆದ ಆವಿಷ್ಕಾರಗಳಿಗಿಂತ ವಿಶಾಲವಾಗಿದೆ ಮತ್ತು ಸುಸ್ಥಿರವಾಗಿದೆ. ಕೃಷಿ ಹೇಗೆ ಹಲವಾರು ದೇಶಗಳ ಬೆನ್ನೆಲುಬು ಆಗಿರುವುದೋ ಅದೇ ರೀತಿ ಮಹಿಳೆಯರು ಕೂಡಾ ಕೃಷಿಯ ಬೆನ್ನೆಲುಬು ಆಗಿದ್ದಾರೆ. ಆಹಾರವು ಪವಿತ್ರ ಆಗಿದ್ದು ಅದು ವ್ಯಾಪಾರದ ಸರಕು ಆಗಬಾರದು. ರೈತರ ನೆಮ್ಮದಿ ಮತ್ತು ಆರೋಗ್ಯಕ್ಕಾಗಿ ಹಾಗೂ ಸತ್ವಯುತ ಆಹಾರಗಳಿಗಾಗಿ ಪರಂಪರಾನುಗತವಾದ ಕೃಷಿಯ ಅವಲಂಬನೆಯಿಂದ ಸಾಧ್ಯವಿದೆ.

ಭಾರತದಲ್ಲಷ್ಟೇ ಅಲ್ಲ. ಎಲ್ಲಾ ದೇಶಗಳಲ್ಲೂ ಬಹು

* 'ಈನಿಂಕಿ', ಕವಿತಾ ಪ್ರಕಾಶನ, ಗುಡಿಕಟ್ಟಿ, ಅಂಚೆ ಕ್ರ 591 104. ಬೆಳಗಾವಿ ಜಿಲ್ಲೆ.

ರಾಷ್ಟ್ರೀಯ ಕಂಪನಿಗಳು ಕೃಷಿರಂಗವನ್ನು ತಮ್ಮ ಲಾಭ ಕೋರತನ ಪ್ರವೃತ್ತಿಗೆ ದುರ್ಬಳಕೆ ಮಾಡಿಕೊಳ್ಳುತ್ತಿವೆ. ಆಹಾರ ಧಾನ್ಯಗಳನ್ನು ಜೈವಿಕ ಇಂಧನದ ಉತ್ಪಾದನೆಗೆ ಬಳಸಲು ಶ್ರೀಮಂತ ರಾಷ್ಟ್ರಗಳು ಮುಂದಾಗಿವೆ. ಜೈವಿಕ ಇಂಧನಕ್ಕಾಗಿ ಆಹಾರಧಾನ್ಯಗಳನ್ನು ಮತ್ತು ಎಣ್ಣೆಕಾಳುಗಳನ್ನು ಬೆಳೆಯಲು ಅಲ್ಲಿಯ ರೈತರಿಗೆ ಧಾರಾಳವಾಗಿ ಸಹಾಯಧನ ಕೊಡುತ್ತಿವೆ. ಆಹಾರ ಧಾನ್ಯಗಳ ಮಾರಾಟದಿಂದ ಹೇರಳ ಲಾಭ ಪಡೆಯುವ ಹುನ್ನಾರವನ್ನು ಮಾಡುತ್ತಿವೆ. ಏಕಬೆಳೆ ಪದ್ಧತಿಯತ್ತ ರೈತರನ್ನು ಆಕರ್ಷಿಸುವುದರ ಜೊತೆಗೆ ವಾಣಿಜ್ಯ ಬೆಳೆಗಳನ್ನು ಬೆಳೆಸುವಂತೆ ರೈತರ ಗಮನ ಸೆಳೆಯಲಾಗುತ್ತಿದೆ. ಹವಾಮಾನದ ಏರುಪೇರಿನಿಂದಾಗಿ ಆಹಾರ ಉತ್ಪಾದನೆ ಅಷ್ಟೇ ಅಲ್ಲ. ಇಡೀ ರೈತ ಸಮುದಾಯದ ಬದುಕಿನ ಮೇಲೂ ದುಷ್ಪರಿಣಾಮ ಬೀರುವಂತಾಗಿದೆ. ಬಿ.ಟಿ. ತಳಿಗಳ ಬೀಜಗಳ ಅಪಾಯ ಕುರಿತಂತೆ, ಬೀಜಗಳ ಅವಲಂಬನೆ ಕುರಿತಂತೆ ಚಿಂತನೆಗಳು ನಡೆದವು. ಇದಲ್ಲದೆ ಇಂತಹ ಹಲವು ಹತ್ತು ಸಂಗತಿಗಳ ಮೇಲೆ ಬೆಳಕು ಚೆಲ್ಲುವ ಅಂತರಾಷ್ಟ್ರೀಯ ಕಾರ್ಯಾಗಾರ ಮಲೇಶಿಯಾ ದೇಶದ ಪೆನಾಂಗದಲ್ಲಿ ಅಕ್ಟೋಬರ್ ತಿಂಗಳು 25ರಿಂದ 31ರ ತನಕ ಜರುಗಿತು.

ಸಾರ್ವಜನಿಕ ಒಳಿತಿಗಾಗಿ ಮತ್ತು ಆಹಾರ ಸಾರ್ವಭೌಮತ್ವಕ್ಕಾಗಿ ಆಹಾರ ಮತ್ತು ಕೃಷಿ ಸಂಶೋಧನೆಗಳ ಪ್ರಜಾತಾಂತ್ರೀಕರಣ ಕುರಿತ ಮರುಚಿಂತನೆಯು ಆಯಾ ದೇಶಗಳ ಅಂತರ್ ಪ್ರಾದೇಶಿಕ ಕಾರ್ಯಾಗಾರದಲ್ಲಿ ನಡೆಯಿತು. ಇದಲ್ಲದೆ ಅಂತರಾಷ್ಟ್ರೀಯ ಆಹಾರ ಸಾರ್ವಭೌಮತ್ವಕ್ಕಾಗಿ ಕೃಷಿ ಸಂಶೋಧನೆಗಳ ಪ್ರಜಾತಾಂತ್ರೀಕರಣ ಕುರಿತ ಕಾರ್ಯಾಗಾರವು ಏರ್ಪಾಡಾಗಿತ್ತು. ಇರಾನ್ ದೇಶದ ಮಾರಿಯಾ, ಮಲೇಶಿಯಾ, ಯುರೋಫ್, ಭಾರತ, ಶ್ರೀಲಂಕಾ, ಫಿಲಿಫೈನ್ಸ್, ಮಾಲಿ, ಪೆರು, ನೇಪಾಳ, ಬಾಂಗ್ಲಾದೇಶ, ಇಂಡೋನೇಶಿಯಾ, ಪಾಕಿಸ್ತಾನ, ಲ್ಯಾಟಿನ್ ಅಮೆರಿಕಾದ ಆ್ಯಂಡಿಜ್ ಮೊದಲಾದ ದೇಶಗಳ ಹಲವಾರು ಸ್ವಯಂ ಸೇವಾಸಂಸ್ಥೆಗಳ ಪ್ರತಿನಿಧಿಗಳು ರೈತರು ಈ ಕಾರ್ಯಾಗಾರಗಳಲ್ಲಿ ಭಾಗವಹಿಸಿ ವಿದ್ವತ್‌ಪೂರ್ಣವಾದ ಪ್ರಬಂಧಗಳನ್ನು ಮಂಡಿಸಿ ಹೊಸ ಹೊಸ ವಿಚಾರಗಳಿಗೆ ನಾಂದಿ ಹಾಡಲಾಯಿತು. ❑

## ಅಂತರಂಗ ಪರಿಜ್ಞಾನ

ನಾವು ನಮ್ಮನ್ನೇ ಕುರಿತು ದೊಡ್ಡ ಭಾವನೆ ತಳೆಯಬಾರದು. ಆ ಭಾವನೆ ನಮ್ಮಲ್ಲಿ ಬಂದರೆ ತಿಳುವಳಿಕೆ, ಸೌಜನ್ಯ ಎರಡೂ ಉಳಿಯುವುದಿಲ್ಲ. ನಮ್ಮಲ್ಲಿ ಪ್ರತಿಯೊಬ್ಬರಲ್ಲಿಯೂ ಬೆಳಕಿದೆ. ನಮ್ಮ ಆಲಕ್ಷ್ಯದಿಂದ ನಾವದನ್ನು ಕಳೆದುಕೊಳ್ಳುತ್ತಿದ್ದೇವೆ. ಅಲ್ಲದೆ ಒಳಗೆ ಎಷ್ಟು ಕುರುಡರಿದ್ದೇವೆಂಬುದನ್ನು ನಾವು ಅನೇಕ ವೇಳೆ ಕಾಣಲಾರದವರಾಗಿದ್ದೇವೆ.

ನಾವು ಅನೇಕ ಸಂದರ್ಭಗಳಲ್ಲಿ ಅನ್ಯಾಯವನ್ನು ಮಾಡುತ್ತಿದ್ದೇವೆ. ನಮ್ಮ ಅನ್ಯಾಯಗಳೆಲ್ಲ ನಮ್ಮ ಕ್ಷಮೆ ಇದೆ. ಅನ್ಯರಲ್ಲಿರುವ ಅಲ್ಪದೋಷಗಳನ್ನು ನಾವು ಎತ್ತಿ ಆಡುತ್ತೇವೆ. ನಮ್ಮಲ್ಲಿರುವ ದೊಡ್ಡ ತಪ್ಪುಗಳನ್ನು ನಾವು ಲಕ್ಷ್ಯಕ್ಕೆ ತಂದುಕೊಳ್ಳುವುದಿಲ್ಲ. ಅನ್ಯರಿಂದ ನಮಗಾಗುತ್ತಿರುವ ತೊಂದರೆಯನ್ನು ನಾವು ಕೂಡಲೇ ಅಳೆದುಬಿಡುತ್ತೇವೆ. ನಮ್ಮಿಂದ ನೋವು ತಿನ್ನುತ್ತಿರುವವರನ್ನು ನಾವು ಗಮನಿಸುವುದೇ ಇಲ್ಲ. ಯಾವ ಮನುಷ್ಯನು ತನ್ನನ್ನು ಕುರಿತು ಅಂತರಂಗದಲ್ಲಿ ವಿವೇಚನೆ ಮಾಡಿಕೊಳ್ಳುತ್ತಾನೆಯೋ ಅಂಥವನು ಅನ್ಯರ ವಿಷಯದಲ್ಲಿ ದುಷ್ಟ ತೀರ್ಮಾನಕ್ಕೆ ಎಂದೂ ಬರುವುದಿಲ್ಲ. ಅಂತರಂಗ ಪರಿಜ್ಞಾನವುಳ್ಳ ಮನುಷ್ಯನು ಉಳಿದೆಲ್ಲ ವಿಷಯಗಳ ಯೋಚನೆಯನ್ನು ಬಿಟ್ಟುಕೊಟ್ಟು ತನ್ನ ಅಂತರಂಗದ ಯೋಚನೆಯನ್ನು ಮೊದಲು ಮಾಡಿಕೊಳ್ಳುತ್ತಾನೆ. ಅನ್ಯರ ವಿಷಯದಲ್ಲಿ ಮೌನವನ್ನು ತಳೆಯದಿದ್ದರೆ ನಿನಗೆ ಅಂತರಂಗ ಶಾಂತಿ ಬರಲಾರದು. ನಿನ್ನ ಬಗ್ಗೆ ನೀನು ಮೊದಲು ಎಚ್ಚರಪಟ್ಟುಕೋ. ನಿನ್ನ ಆತ್ಮದಲ್ಲಿಯೇ ನೀನು ಇರದೇ ಹೋದರೆ ನೀನು ಇರುವುದೆಲ್ಲಿ? ಜಗತ್ತನ್ನೆಲ್ಲ ಸುತ್ತುವರಿದೂ ನಿನ್ನನ್ನು ಅರಿಯದೇ ಹೋದರೆ ಏನನ್ನು ಅರಿತಂತಾಯಿತು ?

-'ಜ್ಞಾನ'ದಿಂದ





## ಯಾರು ಹಿತವರು ?

-ಎಚ್. ಗವಿಸಿದ್ಧಯ್ಯ *

ಆ ವ್ಯಕ್ತಿಗೆ ಮೂರು ಮೂರು ಜನ ಸ್ನೇಹಿತರಿದ್ದರು. ತನ್ನ ಸ್ನೇಹಿತರೊಂದಿಗೆ ಆತ ವಿರಾಮ ಕಾಲವನ್ನು ಸಂತೋಷವಾಗಿ ಕಳೆಯುತ್ತಿದ್ದನು. ಒಂದು ದಿನ ಆಕಸ್ಮಿಕವಾಗಿ ಆ ವ್ಯಕ್ತಿ ಯಾವುದೋ ಅಪರಾಧಕ್ಕೆ ಸಿಲುಕಿ ಕೋರ್ಟಿನ ಕಟಕಟೆಯನ್ನೇರುವ ಪ್ರಸಂಗ ಬಂದಿತು. ತನ್ನ ಸ್ನೇಹಿತರ ಬಗ್ಗೆ ಅಚಲವಾದ ನಂಬಿಕೆಯನ್ನೂಂದಿದ್ದ ಆತ ಸ್ನೇಹಿತರಲ್ಲೊಬ್ಬನನ್ನು ಭೇಟಿಮಾಡಿ, ತಾನು ನಿರಪರಾಧಿ ಎನ್ನುವ ಬಗ್ಗೆ ಸಾಕ್ಷಿ ಹೇಳಲು ಕೇಳಿದ. ಅದಕ್ಕೆ ಆ ಸ್ನೇಹಿತ 'ನಾನು ಮನೆಯಿಂದ ಹೊರಗಡೆ ಬರುವುದಿಲ್ಲ. ಇಲ್ಲಿಂದ ಮಾತ್ರ ಏನಾದರೂ ಸಹಾಯ ಮಾಡುವೆ' ಎಂದುತ್ತರಿಸಿದ.

ಎರಡನೇ ಸ್ನೇಹಿತನನ್ನು ಭೇಟಿ ಮಾಡಿದಾಗ 'ನಾನು ಕೋರ್ಟಿನ ಬಾಗಿಲಿನವರೆಗೆ ಮಾತ್ರ ಬರುವೆ, ಕೋರ್ಟಿನೊಳಗೆ ಪ್ರವೇಶಿಸಿ ಸಾಕ್ಷಿ ಹೇಳಲಾರೆ' ಎಂದುತ್ತರಿಸಿದ.

ಮೂರನೇ ಸ್ನೇಹಿತನನ್ನು ಭೇಟಿ ಮಾಡಿದಾಗ 'ನೀನೆಲ್ಲಿಗೆ ಕರೆದರೂ ಬರುವೆ, ಸಾಕ್ಷಿಯನ್ನೂ ಸಹ ಹೇಳುವೆ' ಎಂದನು.

ಇಲ್ಲಿ ಮೊದಲ ಸ್ನೇಹಿತನೆಂದರೆ 'ಆಸ್ತಿ ಮತ್ತು ಐಶ್ವರ್ಯ' ಅದು ಮನೆಯಲ್ಲಿ ಮಾತ್ರ ಸಾಕ್ಷಿರೂಪದಲ್ಲಿರುತ್ತದೆ.

ನೆಂಟರಿಷ್ಟರು ಎರಡನೇ ಸ್ನೇಹಿತನ ಸ್ಥಾನದಲ್ಲಿರುತ್ತಾರೆ. ಅವರು ಸ್ಮಶಾನದವರೆಗೆ ಮಾತ್ರ ಬರುತ್ತಾರೆ. ಆದರೆ 'ಅಂತಿಮ ತೀರ್ಮಾನ'ದ ಸ್ಥಳದವರೆಗೆ ಬರಲಾರರು.

ಮೂರನೇ ಸ್ನೇಹಿತನೆಂದರೆ, ವ್ಯಕ್ತಿಯು ಗಳಿಸಿದ ಪುಣ್ಯ. ಅದು ವ್ಯಕ್ತಿಯ ಸಾವಿನನಂತರವೂ ಉಳಿಯುತ್ತದೆ. ವ್ಯಕ್ತಿಯ ಮುಗ್ಧತೆ ಮತ್ತು ಶ್ರೇಷ್ಠತೆಗೆ ಜೀವಂತ ಸಾಕ್ಷಿಯಾಗಿ ಶತಶತಮಾನದವರೆಗಿರುತ್ತದೆ. ಮುಂಬರುವ ಜನತೆಗೆ ದಾರಿದೀಪವಾಗುತ್ತದೆ.

ಅಂದರೆ ನಾವು ಮಾಡಿದ ಒಳ್ಳೆಯ ಕಾರ್ಯಗಳಿಂದ ಜನ ನಮ್ಮನ್ನು ನೆನೆಯುತ್ತಾರೆ. ಅವರ ಮನದಾಳದಲ್ಲಿ ಸ್ಥಿರವಾಗುಳಿಯಲು ಸಾಧ್ಯವಾಗುತ್ತದೆ. ನಿದರ್ಶನ ರೂಪದಲ್ಲಿ ನಾವು ಅನೇಕ ಘಟನೆಗಳನ್ನು ಉಲ್ಲೇಖಿಸಬಹುದು.

ಬಹಳ ಹಿಂದೆ ನಡೆದೊಂದು ಘಟನೆ ಹೀಗಿದೆ; ಒಂದು ಸಾರಿ ಸಾಧು ತನ್ನ ಶಿಷ್ಯರೊಂದಿಗೆ, ಆಶ್ರಮದ ಕಡೆಗೆ ಹೋಗುತ್ತಿದ್ದನು. ಅವರು ಒಂದು ಹಳ್ಳಿಯ ಮೂಲಕ ಆಶ್ರಮವನ್ನು ತಲುಪಬೇಕಿತ್ತು. ಆ ಹಳ್ಳಿಯ ಮೂಲಕ ಹಾದು ಹೋಗುತ್ತಿದ್ದಾಗ, ಶವವನ್ನು ಹೊತ್ತು ಸಾಗುತ್ತಿರುವ ದೃಶ್ಯವನ್ನು ಕಂಡರು. ಆಗ ಸಾಧುವಿನ ಶಿಷ್ಯರಲ್ಲೊಬ್ಬ 'ಗುರುಗಳೇ, ಮೃತನಾದವನು ಸ್ವರ್ಗಕ್ಕೆ ಹೋಗಿರುವನೋ; ಇಲ್ಲವೇ ನರಕಕ್ಕೆ ಹೋಗಿರುವನೋ? ಎಂದು ಪ್ರಶ್ನಿಸಿದ. ಸ್ವಲ್ಪ ಹೊತ್ತು ಮೌನತಳೆದ ಆ ಸಾಧು 'ಶಿಷ್ಯ, ಆ ಹಳ್ಳಿಯ ಕೆಲವು ಬೀದಿಗಳಲ್ಲಿ ಅಡ್ಡಾಡುತ್ತಾ, ಜನ ಆ ಸತ್ತ ವ್ಯಕ್ತಿಯ ಬಗ್ಗೆ ಏನು ಹೇಳುವರೆಂದು ತಿಳಿದುಕೊಂಡು ಬಾ' ಎಂದನು.

ಅದರಂತೆ ಹಳ್ಳಿಯ ಕೆಲವು ಬೀದಿಗಳಲ್ಲಿ ತಿರುಗಾಡಿ ಹಿಂದಿರುಗಿ ಬಂದ ಆ ಶಿಷ್ಯ 'ಗುರುಗಳೇ, ಸತ್ತ ವ್ಯಕ್ತಿಯ ಬಗ್ಗೆ ಜನ 'ಬಹಳ ಒಳ್ಳೆಯವನು, ಇರುವಷ್ಟು ಕಾಲ ಇತರರಿಗೆ ಕೇಡು ಬಯಸದೆ ಬಾಳಿದ, ಕಷ್ಟದಲ್ಲಿರುವವರಿಗೆ ನೆರವಾಗುತ್ತಿದ್ದ ಎಂದು ಮಾತನಾಡುತ್ತಿದ್ದಾರೆ' ಎಂದನು.

ಆಗ ಆ ಸಾಧು 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು' ಎನ್ನುವ ಹೇಳಿಕೆಯಂತೆ, ಆತ ದೇವರಿಗೆ ಪ್ರಿಯನಾಗಿ ಸ್ವರ್ಗಕ್ಕೆ ಹೋಗಿದ್ದಾನೆ' ಎಂದುತ್ತರಿಸಿದ.

'ಶರೀರಮಾದ್ಯಂ ಖಲು ಧರ್ಮಸಾಧನಂ' ಎನ್ನುವಂತೆ ನಾವಿರುವಷ್ಟು ಕಾಲ, ದೀಪ ತಾನುರಿದು ಬೆಳಕು ನೀಡುವಂತೆ ಕುರುಡು, ಕುಂಟ ಮತ್ತು ಹೆಳವರಿಗೆ ಕೈಲಾದ ಸಹಾಯ ಮಾಡುವುದನ್ನು ಬೆಳೆಸಿಕೊಂಡರೆ, ಹರನು ಮೆಚ್ಚಿ ಹರಸಿ ಕಾಪಾಡುವನು' ಎನ್ನುವುದರಲ್ಲಿ ಎರಡು ಮಾತಿಲ್ಲ. ❑

* ಉಪನ್ಯಾಸಕರು, ಆವತಿ, ದೇವನಹಳ್ಳಿ ತಾ।।, ಬೆಂಗಳೂರು ಗ್ರಾ।ಜಿಲ್ಲೆ.

RNI No. 17139/69 "Siddaganga" Monthly - Postal Reg. No. KA/SK/TMR/385/2009-11



ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಏರ್ಪಡಿಸಿದ್ದ ಬಸವ ಜಯಂತಿ ಮತ್ತು ಗುರುವಂದನ ಮಹೋತ್ಸವದಲ್ಲಿ ಪರಮಪೂಜ್ಯ ಶ್ರೀಗಳವರು, ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಡಾ.ಎಂ.ಎನ್. ಚನ್ನಬಸಪ್ಪ ಮೊದಲಾದ ಗಣ್ಯರು ಉಪಸ್ಥಿತರಿದ್ದರು



ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಬೋಧಕ ಮತ್ತು ಬೋಧಕೇತರ ನೌಕರರ ಸಂಘ ವತಿಯಿಂದ ಭಕ್ತಿ ಸಮರ್ಪಣೆ.



ವೀರಶೈವ ಸಂಘದವರು ವೆಲ್ಲೂರು ಜಿಲ್ಲೆ, ಗುಡಿಯಾಟಮ್‌ನಲ್ಲಿ ಏರ್ಪಡಿಸಿದ್ಧ ಸಮಾರಂಭದಲ್ಲಿ ಪರಮಪೂಜ್ಯ ಶ್ರೀಗಳವರು ಆಶೀರ್ವಚನ ನೀಡುತ್ತಿರುವುದು. ವೇದಿಕೆಯಲ್ಲಿ ಶ್ರೀ ಶ್ರೀ ಮಹದೇವಸ್ವಾಮಿಗಳು, ಡಾ. ಮಹೇಶ್ವರ ಶಿವಾಚಾರಿ ಸ್ವಾಮಿಗಳು ಹಾಗೂ ಬ್ಯಾಲಕೆರೆ ಶ್ರೀ ಜಯಣ್ಣ, ಶ್ರೀ ಜಿ.ಆರ್. ಷಣ್ಮುಖಪ್ಪ ಮೊದಲಾದವರು ಉಪಸ್ಥಿತರಿದ್ದರು



ದಾವಣಗೆರೆಯಲ್ಲಿ ಯುವ ವೀರಶೈವ ವೇದಿಕೆಯವರು ಏರ್ಪಡಿಸಿದ್ದ ರಾಜ್ಯಮಟ್ಟದ ಸಮಾವೇಶದಲ್ಲಿ ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಮತ್ತು ಹರಗುರು ಚರಮೂರ್ತಿಗಳು ಹಾಗೂ ಗಣ್ಯರು ಭಾಗವಹಿಸಿದ್ದರು




ಶ್ರೀ ಸಿದ್ಧಗಂಗಾ ಫಾರ್ಮಸಿ ಕಾಲೇಜಿನ ವಾರ್ಷಿಕೋತ್ಸವ ಸಮಾರಂಭವನ್ನು ಪರಮಪೂಜ್ಯ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶಾಸಕಿ ಡಾ. ಲೀಲಾ, ಶ್ರೀ ಆನಂದ ರಾಜಶೇಖರ್, ಶ್ರೀ ವಿ.ಬಿ. ದೇಸಾಯಿ, ಡಾ. ಪಿ.ಡಿ. ಗುಪ್ತಾ ಮೊದಲಾದವರು ಉಪಸ್ಥಿತರಿದ್ದರು



ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ನಿವೃತ್ತ ನೌಕರರಾದ ರಾಮದೇವನಹಳ್ಳಿ ಶ್ರೀ .ಚಂದ್ರಪ್ಪ ದಂಪತಿಗಳನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಶ್ರೀ ಚಂದ್ರಪ್ಪನವರ ಕುಟುಂಬ ವರ್ಗದವರು ಹಾಜರಿದ್ದರು.